# ಸಿದ್ಧಗಂಗಾ



ಫೆಬ್ರವರಿ ,1976

ಓಂ

॥ ಶ್ರೀ ಗುರುಸಿದ್ಧಲಿಂಗ ಪ್ರಸನ್ನ ॥



ಅನಾದ್ಯಾತ್ಮ ಸ್ವರೂಪಾಯ ಶಿವಭಾವಪ್ರದಾಯಿನೇ ।
ನಮಸ್ಸದ್ಗುರು ನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ ॥

# ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ರಥೋತ್ಸವಾಹ್ವಾನ ಪತ್ರಿಕಾ.

## ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು

ಶ್ರೀ "ಸಿದ್ಧಗಂಗಾ" ಮಾಸಪತ್ರಿಕೆಯ ವಾಚಕಮಹನೀಯರಿಗೆ

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನಶಕ ೧೮೯೭ ಕ್ಕೆ ಸರಿಯಾದ ಶ್ರೀ ರಾಕ್ಷಸನಾಮ ಸಂವತ್ಸರದ

| | | | | | |
|---|---|---|---|---|---|
| ಮಾಘ | ಬಹುಳ | ೧೧ | ಬುಧವಾರ | 25-2-76 | ಸ್ವಸ್ತಿವಾಚನಾದಿಗಳು ಮತ್ತು ಧ್ವಜಾರೋಹಣಾದಿ ಕಾರ್ಯಗಳು |
| ,, | ,, | ೧೨ | ಗುರುವಾರ | 26-2-76 | ವೃಷಭವಾಹನ ಮತ್ತು ಸಿಂಹವಾಹನ |
| ,, | ,, | ೧೩ | ಶುಕ್ರವಾರ | 27-2-76 | ಹುಲಿವಾಹನ ಮತ್ತು ರಾವಣವಾಹನ |
| ,, | ,, | ೧೪ | ಶನಿವಾರ | 28-2-75 | ಮಹಾಶಿವರಾತ್ರಿ, ಪೂಜಾದಿಗಳು, ಮುತ್ತಿನಪಾಲಕಿಉತ್ಸವ |
| ,, | ● | ೩೦ | ಭಾನುವಾರ | 29-2-76 | ರಥೋತ್ಸವ ಮತ್ತು ರುದ್ರಾಕ್ಷಿಮಂಟಪೋತ್ಸವ |
| ಫಾಲ್ಗುಣ | ಶುದ್ಧ | ೧ | ಸೋಮವಾರ | 1-3-76 | ಗಜವಾಹನ ಮತ್ತು ನಂದಿವಾಹನ |
| ,, | ,, | ೨ | ಮಂಗಳವಾರ | 2-3-76 | ಬೆಳ್ಳಿಪಾಲಕಿಉತ್ಸವ ಮತ್ತು ನವರಂಗ ಪಾಲಕಿಉತ್ಸವ |
| ,, | ,, | ೩ | ಬುಧವಾರ | 3-3-76 | ಬಿಲ್ವವೃಕ್ಷವಾಹನ ಮತ್ತು ಅಶ್ವವಾಹನ |
| ,, | ,, | ೪ | ಗುರುವಾರ | 4-3-76 | ಶೇಷವಾಹನ ಮತ್ತು ತೆಪ್ಪೋತ್ಸವ |
| ,, | ,, | ೫ | ಶುಕ್ರವಾರ | 5-3-76 | ನವಿಲುವಾಹನ ಮತ್ತು ಪಂಚಬ್ರಹ್ಮೋತ್ಸವ |

ಮತ್ತು ಮಾಮೂಲಿನಂತೆ ಎತ್ತಿನ ಪರಿಷೆಯೂ, 3-3-76 ನೇ ಬುಧವಾರ "ದನಗಳ ಪ್ರದರ್ಶನವೂ" ಉತ್ತಮ ರಾಸುಗಳಿಗೆ ಬಹುಮಾನ ವಿನಿಯೋಗವೂ ನಡೆಯುವಂತೆ ಏರ್ಪಡಿಸಿದೆ. "ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನವೂ" ಮತ್ತು ಪ್ರತಿದಿನವೂ ಸಾಯಂಕಾಲ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುವಂತೆ ಏರ್ಪಾಟು ಮಾಡಲಾಗಿದೆ.

ಸರ್ವರೂ ಸಕಾಲದಲ್ಲಿ ಬಂದು ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.

ಶ್ರೀ ಸಿದ್ಧಗಂಗಾ ಕ್ಷೇತ್ರ
ತುಮಕೂರು ಜಿಲ್ಲೆ

ಶ್ರೀ ಶ್ರೀ ಸ್ವಾಮಿಗಳವರು

ಸೂಚನೆ :- ರಾಸುಗಳನ್ನು ಹೊಡೆಯುವವರು ಹಾಗೂ ಅಂಗಡಿಗಳವರು ಜಾತ್ರೆ ಪ್ರಾರಂಭವಾಗುವುದಕ್ಕೆ ಬಹಳ ಮುಂಚಿತವಾಗಿಯೇ ಸೇರುವುದರಿಂದ ಉತ್ಸವಾದಿಗಳಿಗೆ ಬಹಳ ಅನಾನುಕೂಲವಾಗುತ್ತದೆ. ಪ್ರಯುಕ್ತ 26-2-76ರಿಂದ ಬರುವುದಾಗಿ ಸೂಚಿಸಲಾಗಿದೆ.

# 'ಸಿದ್ಧಗಂಗಾ'

ಫೆಬ್ರುವರಿ, ೧೯೭೬

ಸಂಪುಟ-೧೨ ಸಂಚಿಕೆ-೨

---

ಮುಖ ಪುಟ

ಮುಗಿಲ ಮುಟ್ಟದೆ ನೋಡಾ ಹೊಂಗಳಸ
ರಥವೇರಿ ಬರುತಿಹನು ಶ್ರೀ ಸಿದ್ಧಲಿಂಗೇಶ

---

ಪ್ರಕಾಶಕರು
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ
ಹೆಚ್. ಬಿ. ಗಂಗಾಧರಯ್ಯ

ಸಂಪಾದಕರು
ಪಂ॥ ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಹಂಚಿಕೆಯ ವ್ಯವಸ್ಥಾಪಕರು
ಎಸ್. ಗಂಗರುದ್ರಪ್ಪ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ




# ಶ್ರೀವಾಣಿ

ಕರ್ಮ ಅನಿವಾರ್ಯ ಮಾಡಲೇಬೇಕು. ಆದರೆ ಕರ್ಮದ ಫಲವನ್ನು ಅಪೇಕ್ಷಿಸಬಾರದು. ಫಲಾಪೇಕ್ಷೆಯು ಸ್ವಾರ್ಥಸಲ್ಲದು. ಇದನ್ನೇ ಗೀತೆಯಲ್ಲಿ 'ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ' ಎಂಬುದಾಗಿ ಬೋಧಿಸಲಾಗಿದೆ ಭಗವಂತನ ಮೇಲೆ ಭಾರಹಾಕಿ ಕರ್ಮದಲ್ಲಿ ತೊಡಗಬೇಕು. ಕರ್ಮ ಮಾಡಲಷ್ಟೇ ನಮಗೆ ಅಧಿಕಾರವುಂಟು. ಫಲವನ್ನು ಅಪೇಕ್ಷಿಸುವ ಅಧಿಕಾರ ನಮಗಿಲ್ಲ. ಅಲ್ಲದೆ ಮಾನವ ಜನ್ಮ ಅಲಭ್ಯಲಾಭ. ಕೇವಲ ಪುಣ್ಯಸಂಚಯದಿಂದ ಪಡೆಯಬಹುದಾದದ್ದು. ಜೀವನವು ಕ್ರಿಯಾಶೀಲ, ಕರ್ತವ್ಯನಿಷ್ಠ ಹಾಗೂ ದೃಢಸಂಕಲ್ಪವುಳ್ಳದ್ದಾಗಿರಬೇಕು. ಕರ್ಮದ ಹಿಂದೆ ಫಲ ತಾನಾಗಿಯೇ ಬರುತ್ತದೆ. ಇದು ನಿಯತಿನಿಯಮ. ಕರ್ತವ್ಯಕ್ಕೆ ತಕ್ಕ ಪ್ರತಿಫಲ ಇದ್ದೇ ಇರುತ್ತದೆ. ಉದಾಹರಣೆಗೆ ದುಡಿಯುವ ವ್ಯಕ್ತಿಗೆ ವೇತನರೂಪದ ಪ್ರತಿಫಲ ದೊರೆಯುತ್ತದೆ. ಕರ್ತವ್ಯಪರನಾದ ವಿದ್ಯಾರ್ಥಿಗೆ ಅವನ ಅಪೇಕ್ಷಿತ ಫಲವಾದ ಉತ್ತೀರ್ಣತೆ ಸುಲಭಗ್ರಾಹ್ಯ. ನಿರಂತರ ಅಭ್ಯಾಸನಿರತನಾದವನು ಫಲದ ಬಗ್ಗೆ ಚಿಂತಿಸಬೇಕೇಕೆ? ಅದಕ್ಕಾಗಿ ಕಾಲಹರಣ ಸಲ್ಲದು. ಬೇರಾವ ಜೀವಜಂತುಗಳಿಗೂ ಸಿಗಲಾರದಂಥ ಮಹಾಫಲ ಮಾನವಜನ್ಮ. ಅಂತಹ ಪವಿತ್ರಮಯ ಜನ್ಮದ ಸಾರ್ಥಕ್ಯಕ್ಕಾಗಿ ಮಾನವನು ಸದಾಚಾರಸಾಧಕನಾಗಬೇಕು. ಅವನ ಯೋಜನೆಗಳು ಪವಿತ್ರವಾಗಬೇಕು. ಯೋಚನೆಗಳು ಶುದ್ಧವಾಗದ ಹೊರತು ಕೃತಿ ಶುದ್ಧವಾಗದು. ಪ್ರಯುಕ್ತ ಮಾನವ ನಿರಂತರ ಚಿಂತನಶೀಲನಾಗಬೇಕು. ಸತ್‌ಚಿಂತನೆಯ ಪ್ರವೃತ್ತಿಯನ್ನು ಬೆಳೆಸಿಕೊಳ್ಳಬೇಕು. ಆಗ ಮಾತ್ರ ಆತ್ಮವಿಕಾಸಕ್ಕೆ ಎಡೆಯುಂಟು. ಸತ್‌ಚಿಂತನೆಯ ಫಲವಾಗಿ ಅಂತಃಶಕ್ತಿ ಮತ್ತು ಬಾಹ್ಯಶಕ್ತಿಗಳೆರಡನ್ನೂ ಆರ್ಜಿಸಿದಂತಾಗುತ್ತದೆ. ಅಂತಃಶಕ್ತಿಯ ವೃದ್ಧಿಯೇ ಆತ್ಮ ವಿಕಾಸ; ಬಾಹ್ಯಶಕ್ತಿಯ ಅರ್ಜನೆಯೇ ದೃಢಚಿತ್ತತೆಯನ್ನು ಹೊಂದಲನುವಾಗುವ ದೈಹಿಕ ಆರೋಗ್ಯ. ಇವೆರಡೂ ಬಗೆಯ ಶಕ್ತಿಗಳ ಗಳಿಕೆಯಿಂದ ಮಾನವನ ಸರ್ವತೋಮುಖ ಬೆಳವಣಿಗೆ ಸಾಧ್ಯ. ವಿಚಾರವಂತರನೇಕರ ನುಡಿಗಳು ಇದನ್ನೇ ಸಾರಿ ಸಾರಿ ಹೇಳುತ್ತವೆ. ಸಣ್ಣ ಪುಟ್ಟ ಯೋಚನೆಗಳಲ್ಲಿ ಕಾಲಹರಣ ಮಾಡುವಾತನಿಗೆ ಉನ್ನತವಾದ ಯೋಚನೆಗಳಲ್ಲಿ ತೊಡಗಲು ಅವಕಾಶವಿಲ್ಲವಾಗುತ್ತದೆ. —

# ಲೇಖಕರಲ್ಲಿ ಮನವಿ

'ಸಿದ್ಧಗಂಗಾ, ಮಾಸ ಪತ್ರಿಕೆಯು ಲೇಖಕರಿಂದ ವಿಚಾರಪ್ರಚೋದಕವಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಧರ್ಮ, ಸಂಸ್ಕೃತಿ, ಸಾಮಾಜಿಕ, ಐತಿಹಾಸಿಕ ಹಾಗೂ ಸ್ಥಳ ಮಹಾತ್ಮೆಗಳಿಗೆ ಸಂಬಂಧಿಸಿದವುಗಳಾದರೆ ಹೆಚ್ಚು ಆದ್ಯತೆ ನೀಡಲಾಗುವುದು. ಪ್ರಚಲಿತ ಸಾಮಾಜಿಕ ಜೀವನದ ಸಮಸ್ಯೆಗಳನ್ನು ಬಿಂಬಿಸುವ ಹಾಗೂ ಅವುಗಳಿಗೆ ಪರಿಹಾರ ಸೂಚಿಸುವ ಸಣ್ಣಕಥೆ, ಕವನ ಹಾಗೂ ಪ್ರಬಂಧಗಳಿಗೂ ಸ್ವಾಗತವುಂಟು. ಸ್ವೀಕೃತವಾದ ಲೇಖನಗಳಿಗೆ 'ಸಿದ್ಧಗಂಗಾ' ಅಂಗಿದಾಗ್ಗೆ ನಿಗದಿ ಮಾಡಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು ಸ್ಫುಟವಾಗಿ ಕಾಗದದ ಒಂದೇ ಮಗ್ಗುಲಲ್ಲಿ ಬರೆದು "ಸಂಪಾದಕರು **'ಸಿದ್ಧಗಂಗಾ' [ಕನ್ನಡ ಮಾಸಪತ್ರಿಕೆ]** **ಶ್ರೀ ಸಿದ್ಧಗಂಗಾ ಕ್ಷೇತ್ರ, ಕ್ಯಾತ್ಸಂದ್ರ-572131 ತುಮಕೂರು ಜಿಲ್ಲೆ". ಇವರಿಗೆ ಕಳುಹಿಸಿಕೊಡಬೇಕಾಗಿ ವಿನಂತಿ.**

## ಪ ರಿ ವಿ ಡಿ



## ಚಂದಾ ಬಗ್ಗೆ ಸೂಚನೆ

ಚಂದಾ ಬಾಕಿಯಿರುವವರು ದಯವಿಟ್ಟು ಶೀಘ್ರವಾಗಿ ಎಂ. ಓ ಮೂಲಕ **ಪ್ರಕಾಶಕರು, 'ಸಿದ್ಧಗಂಗಾ'** [ಕನ್ನಡ ಮಾಸಪತ್ರಿಕೆ] ಶ್ರೀ ಸಿದ್ಧಗಂಗಾ **ಕ್ಷೇತ್ರ ಕ್ಯಾತ್ಸಂದ್ರ**-572131, **ತುಮಕೂರು ಜಿಲ್ಲೆ.**

ಈ ವಿಳಾಸಕ್ಕೆ ಕಳುಹಿಸಿಕೊಡುವುದರ ಮೂಲಕ ಎಂದಿನಂತೆ ಸಹಕರಿಸಬೇಕಾಗಿ ವಿನಂತಿ.

ವಾರ್ಷಿಕ ಚಂದಾ : 10 **ರೂ.ಗಳು, ಆಜೀವ ಸದಸ್ಯತ್ವ:** 101 **ರೂ. ಗಳು.**

ಲಿಂ॥ ಪಂಡಿತರತ್ನ

# ಡಾ॥ ಬಿ. ಶಿವಮೂರ್ತಿಶಾಸ್ತ್ರಿಗಳು

—ಚನ್ನಪ್ಪ ಎರೇಸೀಮೆ

ಕರ್ನಾಟಕದಲ್ಲಿ ಲಿಂಗೈಕ್ಯ ಪಂಡಿತರತ್ನ ಡಾ॥ ಬಿ. ಶಿವಮೂರ್ತಿಶಾಸ್ತ್ರಿಯವರ ಹೆಸರನ್ನು ಕೇಳದವರಿಲ್ಲ. ಅವರು ಕೀರ್ತನಕಾರರಾಗಿ, ಪ್ರವಚನಕಾರರಾಗಿ, ಕವಿಗಳಾಗಿ, ಪ್ರಬಂಧ, ಹರಟೆ, ಸಂಶೋಧನೆ, ಜೀವನ ಚರಿತ್ರೆ ಮೊದಲಾದ ಸಾಹಿತ್ಯ ಪ್ರಾಕಾರಗಳ ಲೇಖಕರಾಗಿ, ಪತ್ರಿಕಾಸಂಪಾದಕರಾಗಿ, ಉದ್ಬೋಧಕ ಭಾಷಣಕಾರರಾಗಿ ಕನ್ನಡ ನಾಡಿನುದ್ದಗಲಕ್ಕೂ ಆಬಾಲವೃದ್ಧರಿಗೆಲ್ಲ ಪರಿಚಿತರಾಗಿದ್ದ ಧೀಮಂತ ವ್ಯಕ್ತಿತ್ವ ಗಳಿಸಿದ್ದವರು. ೭೩ವರ್ಷಗಳ ನಿಡುಬಾಳನ್ನು ಪೂರ್ಣಗೊಳಿಸಿ, ತಾ॥ ೧೫-೧-೭೬ನೆಯ ಗುರುವಾರ ಲಿಂಗೈಕ್ಯರಾದ ಶಾಸ್ತ್ರಿಗಳು ಕನ್ನಡ ನಾಡಿಗೆ ತುಂಬಿ ಬಾರದ ನಷ್ಟವಾದರು. ಹುಟ್ಟು ಹೋರಾಟಗಾರರಾಗಿದ್ದ ಶಾಸ್ತ್ರಿಗಳು ಕಳೆದ ಐದಾರು ತಿಂಗಳಿನಿಂದ ಅಸ್ವಸ್ಥರಾಗಿದ್ದು ಅಸ್ವಸ್ಥತೆಯಲ್ಲಿಯೇ ಬಹುಮುಖ ಕಾರ್ಯಚಟುವಟಿಕೆಗಳನ್ನಿಟ್ಟುಕೊಂಡು ಮೃತ್ಯುವಿನೊಡನೆ ಹೋರಾಟಮಾಡಿ ಭೀಷ್ಮರು ಉತ್ತರಾಯಣ ಪುಣ್ಯಕಾಲವನ್ನೇ ನಿರೀಕ್ಷಿಸುತ್ತಿದ್ದು ಆ ದಿವಸ ಬಂದಾಗ ತಮ್ಮ ಪಾರ್ಥಿವ ಶರೀರವನ್ನು ತ್ಯಜಿಸಿದಂತೆ ಉತ್ತರಾಯಣ ಪುಣ್ಯಕಾಲದಿನದಂದು ಲಿಂಗೈಕ್ಯರಾಗಿ ಗೋಸಲ ಸಿದ್ಧೇಶ್ವರ, ತೋಂಟದ ಸಿದ್ಧಲಿಂಗೇಶ್ವರರುಗಳ ಪುಣ್ಯ ತಪೋಭೂಮಿ ಎನಿಸಿದ ಶ್ರೀ ಸಿದ್ಧಗಂಗಾಕ್ಷೇತ್ರದ ಮಡಲಿಗೆ ತಮ್ಮ ಪಾರ್ಥಿವ ಶರೀರವನ್ನು ಅರ್ಪಿಸಿ ಯಶಶ್ಶರೀರಿಗಳಾದರೆನ್ನಬಹುದು. ಅವರ ಜೀವನದ ಸ್ಥೂಲ ಪರಿಚಯವನ್ನು ನಮ್ಮ ಪತ್ರಿಕೆಯ ಓದುಗರ ಪ್ರಯೋಜನಕ್ಕೆ ಈ ಕೆಳಗೆ ಮಾಡಿಕೊಡಲಾಗಿದೆ.

### ಹುಟ್ಟು- ಬಾಲ್ಯ- ಉದ್ಯೋಗ

ತುಮಕೂರಿನ ಹುಚ್ಚೆಂಕಟೇಪುರದ ಬಸವಯ್ಯ ನೀಲಮ್ಮದಂಪತಿಗಳ ಪುತ್ರರೆನಿಸಿ ತಾ॥ ೨೩-೩-೧೯೦೩ ರಲ್ಲಿ (ಶುಭಕೃತು ಸಂವತ್ಸರ ಮಾರ್ಗಶೀರ್ಷ ಬಹುಳ ಏಕಾದಶಿ ಸೋಮವಾರ) ಸಂಜನಿಸಿದ ಶಾಸ್ತ್ರಿಗಳ ಬಾಲ್ಯದ ವಿದ್ಯಾಭ್ಯಾಸ ತುಮಕೂರಿನಲ್ಲಿ ನಡೆಯಿತು. ಲೋವರ್ ಸೆಕೆಂಡರಿ, ಅಪ್ಪರ್ ಸೆಕೆಂಡರಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ ೧೯೨೩ ರಲ್ಲಿ ಉಪಾಧ್ಯಾಯ ವೃತ್ತಿಯಲ್ಲಿ ಜೀವನರಂಗ ಪ್ರವೇಶಿಸಿದ ಶಾಸ್ತ್ರಿಗಳವರು ತಮ್ಮ ತಂದೆಯವರು ಮಾಡುತ್ತಿದ್ದ ಪುರಾಣ ಪ್ರವಚನಗಳಲ್ಲಿ ಬಾಲ್ಯದಿಂದಲೂ ಅಭಿರುಚಿ ಹೊಂದಿದವರಾಗಿದ್ದರು. ಒಮ್ಮೆ ಇವರು ಉತ್ಸಾಹದಿಂದ ರಾಜಶೇಖರವಿಲಾಸವನ್ನು ಒಂದೂರಿನಲ್ಲಿ ಪ್ರವಚನ ಮಾಡುತ್ತಿದ್ದಾಗ 'ಜವವಿಲ್ಲದಶ್ವ' ಎಂಬ ವಾಕ್ಯಕ್ಕೆ ಅರ್ಥ ಮಾಡುವುದು ಗೊತ್ತಾಗದೆ 'ಜವ' ಶಬ್ದಕ್ಕೆ ಕುದುರೆಯ ಕುತ್ತಿಗೆಯ ಮೇಲಿರುವ ಕೂದಲುಗಳ ಸಮೂಹ (ಆಯಾಲ) ಎಂದು ಅರ್ಥ ಮಾಡಿದರಂತೆ. ಕೇಳುತ್ತಿದ್ದ ವಯೋವೃದ್ಧರೊಬ್ಬರು 'ಏನು ಶಾಸ್ತ್ರಿಗಳೇ, ಜವವಿಲ್ಲದಶ್ವ ಎಂದರೆ ವೇಗವಿಲ್ಲದ ಕುದುರೆಯಲ್ಲವೆ? ಚೆನ್ನಾಗಿ ಅರ್ಥಜ್ಞಾನವಿಲ್ಲದೆ ಹೀಗೆಲ್ಲ ಪುರಾಣ ಹೇಳಲು ಬರಬಾರದು' ಎಂದು ಯಾವ ದಯಾ ದಾಕ್ಷಿಣ್ಯವಿಲ್ಲದೆ ನುಡಿದುಬಿಟ್ಟರಂತೆ. ಈ ಮಾತಿನಿಂದ ನಾಚಿಕೊಂಡ ಶಾಸ್ತ್ರಿಗಳು ಹೆಚ್ಚಿನ ವಿದ್ಯಾಭ್ಯಾಸಕ್ಕೆ ಮನಸ್ಸುಮಾಡಿದರಂತೆ. ಮೈಸೂರಿನ ಶ್ರೀ ಶಿವಪ್ಪಶಾಸ್ತ್ರಿಗಳು, ಶ್ರೀ ಪಿ. ಆರ್. ಕರಿಬಸವಶಾಸ್ತ್ರಿ ಮೊದಲಾದ ಆಗಿನ ಪ್ರಸಿದ್ಧ ವಿದ್ವಾಂಸರಿಂದ ಸಾಹಿತ್ಯ ಜ್ಞಾನವನ್ನು ವಿಶೇಷವಾಗಿ ಪಡೆದುಕೊಂಡು ಮುಂದೆ ಉಪಾಧ್ಯಾಯ ವೃತ್ತಿಗೆ ಶರಣು ಹೊಡೆದು ಕೀರ್ತನಕಾರರಾಗಿ ಕರ್ನಾಟಕದ ಮೂಲೆ ಮೂಲೆಗಳಲ್ಲೂ ಸಂಚರಿಸಿ ಕನ್ನಡನಾಡಿನ ಕಲೆ, ಇತಿಹಾಸ, ವೈಭವಗಳಿಗೆ ಮಾರುಹೋಗಿ

ಮುಂದೆ ಕರ್ನಾಟಕದ ಏಕೀಕರಣದ ಮಹಾ ಆಂದೋಳನದಲ್ಲಿ ತಮ್ಮನ್ನು ತಾವು ಅರ್ಪಿಸಿಕೊಂಡರು. ನಾಡಿನ ಮೂಲೆ ಮೂಲೆಗಳಲ್ಲಿ ಅಡಗಿರುವ ಓಲೆಗ್ರಂಥಗಳು, ಕೈ ಬರಹದ ಪ್ರತಿಗಳೇ ಮೊದಲಾದವುಗಳ ಸಂಗ್ರಹವನ್ನು ಮಾಡತೊಡಗಿದರು. ಆಗಿನ ನಾಡಿನ ಮುಖಂಡರಾದ ಕಡಪಾ ರಾಘವೇಂದ್ರರಾಯರು, ಆಲೂರು ವೆಂಕಟರಾಯರು, ಹರ್ಡೇಕರ್ ಮಂಜಪ್ಪ, ಡಾ॥ ಹಳಕಟ್ಟಿ, ಪ್ರೊ ಬಸವನಾಳ, ವೆಂಕಟನಾರಾಣಪ್ಪ, ಆರ್. ನರಸಿಂಹಾಚಾರ್, ಶಾಮಾಶಾಸ್ತ್ರಿಗಳೇ ಮೊದಲಾದವರ ಗಾಢ ಸ್ನೇಹಲಾಭ ಪಡೆದರು. ರಾಜಕೀಯ ಮುಖಂಡರನೇಕರ ನಿಕಟ ಸಂಪರ್ಕವನ್ನು ಇಟ್ಟುಕೊಂಡರು. ಇದೂ ಅಲ್ಲದೆ ಕನ್ನಡನಾಡಿಗೆ ತಮ್ಮ ತಪಸ್ಸಿನ ತೈಲವೆರೆದು ದೀಪ ಬೆಳಗಿದ ಗೋವಿಂದಪೈ, ಮುಳಿಯ ತಿಮ್ಮಪ್ಪಯ್ಯ, ದೇವುಡು, ಎಂ. ಆರ್. ಶ್ರೀನಿವಾಸಮೂರ್ತಿ, ಮುದವೀಡು ಕೃಷ್ಣರಾಯರು, ಪ್ರೊ. ವೆಂಕಣ್ಣಯ್ಯ, ಹುಲ್ಲೂರು ಶ್ರೀನಿವಾಸಜೋಯಿಸ್, ರಾಜಪುರೋಹಿತ ಮೊದಲಾದ ಸಾಹಿತಿಗಳ ಮತ್ತು ಸಂಶೋಧಕರ ಮೈತ್ರಿಯನ್ನು ಹೊಂದಿದವರಾದರು.

**ಬೆಂಗಳೂರಿಗೆ ಆಗಮನ ಮತ್ತು ಪತ್ರಿಕಾರಂಗ ಪ್ರವೇಶ:**

೧೯೩೭ ರಲ್ಲಿ ಸರ್ ಕೆ. ಪಿ. ಪುಟ್ಟಣ್ಣಸೆಟ್ಟರು, ದಿವಾನ್ ಬಹದ್ದೂರ್ ಪಿ. ಮಹಾದೇವಯ್ಯನವರು, ಜಿ. ಶಾಂತವೀರಪ್ಪನವರು, ಮಿರ್ಜಾ ಇಸ್ಮಾಯಿಲ್ ರವರುಗಳ ಪ್ರೋತ್ಸಾಹದಿಂದ ತುಮಕೂರನ್ನು ಬಿಟ್ಟು ಬೆಂಗಳೂರಿಗೆ ಬಂದು 'ಶರಣಸಾಹಿತ್ಯ' ಮಾಸಪತ್ರ ಸಂಪಾದಕರಾಗಿ ಪತ್ರಿಕಾರಂಗ ಪ್ರವೇಶ ಮಾಡಿದರು. ೧೯೩೯ ರಲ್ಲಿ ತಮ್ಮದೇ ಆದ ಮುದ್ರಣಾಲಯವನ್ನು ಸ್ಥಾಪಿಸಿ 'ಸ್ವತಂತ್ರ ಕರ್ನಾಟಕ' ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಈ ಕಾರಣದಿಂದಾಗಿ ಶಾಸ್ತ್ರಿಗಳವರ ಕೀರ್ತಿಲತೆ ದಾಂಗುಡಿಯಿಟ್ಟು ಬಹುಮುಖವಾಗಿ ನಾಡಿನುದ್ದಗಲಕ್ಕೂ ಹರಡಿತು. ಸ್ವತಂತ್ರ ಕರ್ನಾಟಕ ಪತ್ರಿಕೆ ಕಾರಣಾಂತರಗಳಿಂದ ಕೆಲವಾರು ದಿನಕ್ಕೆ ನಿಂತಿತು. ಆದರೆ ಶರಣ ಸಾಹಿತ್ಯ ಮಾತ್ರ ಅಖಂಡ ಮೂವತ್ತಾರುವರ್ಷಗಳವರೆಗೆ ನಡೆದುಬಂದು ನಾಡುನುಡಿಯ ಅಮೋಘ ಸೇವೆ ಸಲ್ಲಿಸಿತು. ಇದೇ ಹೆಸರಿನ ಪ್ರಕಟನಾಲಯದಿಂದ ಅನೇಕ ಗ್ರಂಥಗಳನ್ನು ಪ್ರಕಟಿಸಿದ ಶಾಸ್ತ್ರಿಗಳವರ ಸಾಹಿತ್ಯ ಸಂಸ್ಕೃತಿಗಳ ಸೇವೆ, ನಿರತಪರಿಶ್ರಮ, ವಿದ್ವತ್ತುಗಳು ಮುಂದಿನವರುಗಳಿಗೆ ಮಾರ್ಗದರ್ಶಕ ಮತ್ತು ಸ್ಫೂರ್ತಿದಾಯಕ. ಶಾಸ್ತ್ರಿಗಳ ಸಂಶೋಧನಾ ಬುದ್ಧಿ, ಸಾಮಾಜಿಕ ಪ್ರಜ್ಞೆ, ನಾಡಿನ ಉಜ್ವಲ ಪರಂಪರೆಯನ್ನು ಬೆಳಗಿಸಬೇಕೆಂಬು ವಲ್ಲಿದ್ದ ಉತ್ಕಟಾಭಿಮಾನಗಳು. ಅವರ ಪ್ರತಿಯೊಂದು ಲೇಖನದಲ್ಲೂ ಎದ್ದು ಕಾಣುವ ಪ್ರಧಾನ ಅಂಶಗಳಾಗಿದ್ದವು.

**ಸನ್ಮಾನಗಳು, ಬಿರುದು ಬಾವಲಿಗಳು.**

ಶಾಸ್ತ್ರಿಗಳವರ ಈ ರೀತಿಯ ಬಹುಮುಖ ಸೇವೆಯನ್ನು ಗುರುತಿಸಿ ಅರಮನೆ ಗುರುಮನೆಗಳೆರಡೂ ಇವರನ್ನು ಗೌರವಿಸಿದವು. ೧೯೪೦ ರಲ್ಲಿ ಮೈಸೂರು ಮಹಾರಾಜರು 'ಆಸ್ಥಾನವಿದ್ವಾನ್' ಎಂಬ ಪದವಿಯನ್ನೂ ೧೯೪೮ ರಲ್ಲಿ 'ಪಂಡಿತರತ್ನ' ಪದವಿಯನ್ನೂ ಇತ್ತು ಗೌರವಿಸಿದರು. ಶ್ರವಣಬೆಳ್ಗೊಳ, ಶ್ರೀ ರಂಭಾಪುರಿ, ಉಜ್ಜಯಿನಿ, ಶ್ರೀಶೈಲ, ಕಾಶಿ ಜಗದ್ಗುರುಗಳವರು ಚಿತ್ರದುರ್ಗದ ಜಗದ್ಗುರುಗಳವರೂ, ಶಾಸ್ತ್ರಿಗಳನ್ನು ಬರಮಾಡಿಕೊಂಡು ಕೀರ್ತನ ವಿಚಕ್ಷಣ ಕೀರ್ತನ ಕೇಸರಿ, ಕೀರ್ತನಾಚಾರ್ಯ, ಕೀರ್ತನ ಕವಿರಾಜ, ವಿಮರ್ಶನಾಚಾರ್ಯ, ಕರ್ನಾಟ ವಿಭೂಷಣ, ವಿದ್ಯಾವಾರಿಧಿ, ಸಮಾಜ ಭಾಸ್ಕರ ಇತ್ಯಾದಿ ಅನೇಕ ಬಿರುದುಗಳನ್ನಿತ್ತು ಗೌರವಿಸಿದವು. ೧೯೬೬ ರಲ್ಲಿ ಭಾರತ ಸರ್ಕಾರ 'ಪದ್ಮಶ್ರೀ' ಬಿರುದನ್ನಿತ್ತು ಗೌರವಿಸಿತು. ೧೯೬೭ ರಲ್ಲಿ ಮೈಸೂರು ಸಾಹಿತ್ಯ ಅಕ್ಯಾಡೆಮಿಯು ಗೌರವಿಸಿತು. ಇಷ್ಟೆಲ್ಲ ಗೌರವಾದರಗಳಿಗೆ ಪಾತ್ರರಾಗಬೇಕಾದರೆ ಶಾಸ್ತ್ರಿಗಳವರ ಆಳ್ತನವೇನು? ವಿದ್ವತ್ತೇನು? ಬಹುಮುಖ ಪ್ರತಿಭೆಯೇನು? ಎಂಬುದರ ಅರಿವಾಗದೆ ಇರದು.

**ಪರಿಷದಧ್ಯಕ್ಷರಾಗಿ ಮತ್ತು ಸಾರ್ವಜನಿಕ ಸೇವೆಯಲ್ಲಿ**

೧೯೫೪ ರಿಂದ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಸ್ಥಾನಕ್ಕೆ ಆರಿಸಲ್ಪಟ್ಟ ಶಾಸ್ತ್ರಿಗಳವರು ಆಗಿನ

[ 26 ನೇ ಪುಟ ನೋಡಿ ]

# ಶರಣು-ಶರಣು

—ರಂ. ಶ್ರೀ. ಮುಗಳಿ.

ರೂಢಿಯಲ್ಲಿ ನಾವು ಅರ್ಥಪೂರ್ಣವಾದ ಕೆಲವು ಶಬ್ದಗಳನ್ನು ಬಳಸುತ್ತಿರುತ್ತೇವೆ. ಆದರೆ ಅವುಗಳಲ್ಲಿ ಏನು ಅರ್ಥ ತುಂಬಿಕೊಂಡಿವೆ ಎಂಬುದನ್ನು ನಾವು ಸಾಮಾನ್ಯವಾಗಿ ಗಮನಿಸುವುದಿಲ್ಲ. ಇಂಥ ಶಬ್ದಗಳಲ್ಲಿ 'ಶರಣು' ಎಂಬುದೊಂದು. ಪರಿಚಯದವರನ್ನು ಇದಿರು ಕಂಡರೆ ಕೆಲವರು ಶರಣು ಅನ್ನುತ್ತಾರೆ; ಶರಣು; ಶರಣಾರ್ಥಿ ಅನ್ನುತ್ತಾರೆ. ಅದರ ಅರ್ಥವೇನು ಎಂದು ಕೇಳಿದರೆ 'ನಮಸ್ತೇ, ನಮಸ್ಕಾರ' ಎಂದು ಅಂದ ಹಾಗೆ ಎಂದಿಷ್ಟು ಹೇಳಬಹುದು. ಅದು ಹೇಗೆ ಆ ಅರ್ಥ ಬಂತು ? ಇನ್ನೂ ಏನಾದರೂ ಅರ್ಥವಿರಬಹುದೇ ? ಎಂಬ ಪ್ರಶ್ನೆ ನಮ್ಮನ್ನು ಕೆಣಕುವುದಿಲ್ಲ. ಇಂಥ ಪ್ರಶ್ನೆಗಳು ಹುಟ್ಟಬೇಕು, ಉತ್ತರ ಪಡೆಯಲು ಹವಣಿಸಬೇಕು. ಆಗ ಭಾಷೆಯೂ ಬೆಳೆಯುತ್ತದೆ, ಭಾಷೆಯನ್ನಾಡುವವರ ಸಂಸ್ಕೃತಿಯೂ ಬೆಳೆಯುತ್ತದೆ.

### ಆಶ್ರಯ-ಆಧಾರ ಇರಲಿ

ಸಂಸ್ಕೃತವಲ್ಲಿ ಶರಣ ಅಂದರೆ ಸಹಾಯ, ಸಂರಕ್ಷಣೆ, ಆಶ್ರಯ, ಆಧಾರ ಎಂಬ ಅರ್ಥಗಳಿರುತ್ತವೆ. 'ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ' ಅಂದರೆ 'ಬೇರೆ ಯಾವ ಆಧಾರವೂ ಇಲ್ಲ, ನೀನೇ ನನಗೆ ಆಧಾರ, ಸಹಾಯ' ಎಂಬುದಾಗಿ ದೇವರಲ್ಲಿ ಭಕ್ತನು ಮೊರೆಯಿಡುತ್ತಾನೆ. ಕನ್ನಡದಲ್ಲಿ ಕವಿಗಳು ಮತ್ತು ಸಂತರು 'ಶರಣಾಗು ಪ್ರಥಮಜಿನೇಶ' 'ನೀನೆನಗೆ ಶರಣಾಗು ನಿಜಸುಖದ ಸಾಗರನೆ' ಎಂದು ಬೇಡಿಕೊಂಡಾಗ ದೈವೀ ಆಶ್ರಯವನ್ನೂ ಸಹಾಯವನ್ನೂ ಕೋರಿದ್ದಾರೆ. ದೇವರನ್ನು ಕುರಿತು ಈ ಕೋರಿಕೆ ಸರಿ. ಆದರೆ ನಾವು ಮನುಷ್ಯರನ್ನು ಕುರಿತು ಶರಣು ಎಂದೇಕೆ ಅನ್ನುತ್ತೇವೆ ? ಇದಕ್ಕೆ ಎರಡು ಬಗೆಯಲ್ಲಿ ವಿವರಣೆ ಕೊಡಬಹುದು. ನಮ್ಮ ಸಂಸ್ಕೃತಿಯಲ್ಲಿ ಈಶ್ವರನು ಸರ್ವವ್ಯಾಪಿ ಸರ್ವಸಂನಿಧನೆಂಬ ನಂಬಿಕೆ ಸಾವಿರಾರು ವರ್ಷಗಳಿಂದ ಬೆಳೆದು ಬಂದಿದೆ. ಪ್ರತಿಯೊಬ್ಬ ಮನುಷ್ಯನಲ್ಲಿಯೂ ಈಶ್ವರನ ಅಂಶವಿರುತ್ತದೆ. ಅದು ಅವರು ತೋರುವ ಸ್ನೇಹದಲ್ಲಿ, ಮಾಡುವ ಸಹಾಯ-ಸಹಕಾರದಲ್ಲಿ ಮೂಡಿಬರುತ್ತದೆ. ಅಂತೆಯೇ ನಮಗೆ ಪರಿಚಿತರಾದ ಮತ್ತು ಆತ್ಮೀಯರಾದ ಮನುಷ್ಯರು ತಮ್ಮ ಸ್ನೇಹದಿಂದ ನಮಗೆ ಈಶ್ವರಸ್ವರೂಪರಾಗಿರುತ್ತಾರೆ. ಅವರನ್ನು ಕಂಡೊಡನೆ ನಾವು ಶರಣು ಅನ್ನುತ್ತೇವೆ. 'ನಿಮ್ಮ ಸ್ನೇಹದ ಆಶ್ರಯ, ಆಧಾರ ನಮಗೆ ಯಾವಾಗಲೂ ಇರಲಿ' ಎಂದು ಹಾರೈಸುತ್ತೇವೆ. ಶರಣಾರ್ಥಿ ಎಂದರೆ ಈ ಆಶ್ರಯವನ್ನು ಬಯಸುವವರು ನಾವು ಎಂದು ಅರ್ಥ. ಇನ್ನೊಂದು ಬಗೆಯಲ್ಲಿ ಪ್ರತಿಯೊಬ್ಬ ವ್ಯಕ್ತಿ ಸಮಾಜಪುರುಷನ ಪ್ರತಿನಿಧಿಯಾಗುತ್ತಾನೆ. ಅವನಿಂದ ನಾವು ಅನೇಕ ರೀತಿಯಲ್ಲಿ ಸಹಾಯ ಸಹಕಾರವನ್ನು ಪಡೆಯುತ್ತಿರುತ್ತೇವೆ. ನಾವು ಅವರಿಗೆ ಅದನ್ನು ನೀಡುತ್ತಿರುತ್ತೇವೆ. ಹೀಗೆ ಸಮಾಜಜೀವಿಗಳಾದ ನಾವು ಒಬ್ಬರೊಬ್ಬರನ್ನು ಕಂಡಾಗ ಶರಣು ಅಂದರೆ ನಮ್ಮ ಸಾಮಾಜಿಕ ಪ್ರಜ್ಞೆಯನ್ನು ಎಚ್ಚರಗೊಳಿಸುತ್ತೇವೆ; ಸಾಮಾಜಿಕ ಕರ್ತವ್ಯಗಳನ್ನು ನೆನಸಿಕೊಳ್ಳುತ್ತೇವೆ.

ಈ ಸಂದರ್ಭದಲ್ಲಿ ಶರಣ ಶಬ್ದವು ಕನ್ನಡನಾಡಿನ ಧಾರ್ಮಿಕ ಪರಂಪರೆಯಲ್ಲಿ, ವಿಶೇಷವಾಗಿ ವೀರಶೈವ ಮತದಲ್ಲಿ ಮತ್ತು ವಚನಸಾಹಿತ್ಯದಲ್ಲಿ ಪಡೆದ ಆಳವಾದ ಅರ್ಥವನ್ನು ನೆನೆಯಬೇಕು. ಸಂಸ್ಕೃತದಲ್ಲಿ ಈಶ್ವರನು ಭಕ್ತನಿಗೆ ಶರಣನಾದರೆ ಕನ್ನಡದಲ್ಲಿ ಈಶ್ವರನ ಭಕ್ತರು, ಈಶ್ವರನ ಸ್ವರೂಪರು, ಶರಣರೂ ಶರಣೆಯರೂ ಆಗಿರುತ್ತಾರೆ. ಈಶ್ವರನಲ್ಲಿ ಸರ್ವವನ್ನೂ ಸಮರ್ಪಿಸಿದವರೇ ಈ ಶರಣ-ಶರಣೆಯರು. ಈಶ್ವರನಲ್ಲಿ ಶರಣುಹೋಗಿ ತಮ್ಮದನ್ನೆಲ್ಲ ಅವನಲ್ಲಿ ಸಮರ್ಪಿಸಿ ಅವರು ಶರಣ-ಶರಣೆಯರಾಗಿರುತ್ತಾರೆ. ಇಡೀ ಮಾನವ ಜನಾಂಗದ ಏಳಿಗೆಯನ್ನು ಅವರು ಬಯಸುತ್ತಾರೆ. ಸಕಲ ಜೀವಾತ್ಮರ ಲೇಸನ್ನು ಬಯಸುವ ಶರಣರಾಗುತ್ತಾರೆ.

[25 ನೇ ಪುಟ ನೋಡಿ]

# ಶರಣೆ ಲಿಂಗಮ್ಮ

— ಶಾಂತದೇವಿ, ಮಾಳವಾಡ.

ಹನ್ನೆರಡನೆಯ ಶತಮಾನದಲ್ಲಿ ಕಲ್ಯಾಣ ಪಟ್ಟಣವು "ಸತ್ಯದ ಸಾಗರ, ಭಕ್ತಿಯ ತವರ್ಮನೆ, ಮುಕ್ತಿಗೆ ಮುಖ, ಪುಣ್ಯದ ಪುಂಜ, ಅಭಿನವ ಕೈಲಾಸ" ವೆನಿಸಿತ್ತು. ಕಲ್ಯಾಣದ ಕೀರ್ತಿ ಈ ರೀತಿ ಹೆಚ್ಚಲು ಬಸವಣ್ಣನವರ ಭಕ್ತಿ ಕಾರಣವಾಗಿತ್ತು. ಬಸವಣ್ಣನವರ ಅಧ್ಯಾತ್ಮಶಕ್ತಿಯ ಪ್ರಭಾವದಿಂದ ಸಾವಿರಾರು ಜನ ಭಾರತದ ನಾಲ್ಕೂ ನಿಟ್ಟಿನಿಂದ ಕಲ್ಯಾಣಕ್ಕೆ ಬಂದರು. ಹೂವಿನ ಪರಿಮಳಕ್ಕೆ ಭ್ರಮರಗಳು ಬರುವಂತೆ ಅಧ್ಯಾತ್ಮ ಶಕ್ತಿಯನ್ನು ಪಡೆಯಬೇಕೆನ್ನುವವರು ಬಸವಣ್ಣನವರ ಬಳಿ ಕಲ್ಯಾಣಕ್ಕೆ ಬಂದರು. ಅವರಲ್ಲಿ ಹಡಪದ ಅಪ್ಪಣ್ಣ ಅವರ ಪತ್ನಿ ಲಿಂಗಮ್ಮ ಅಗ್ರಗಣ್ಯರಾಗಿದ್ದಾರೆ.

ಅಪ್ಪಣ್ಣ ಬಸವಣ್ಣನವರ ಆಪ್ತಕಾರ್ಯದರ್ಶಿಯಂತಿದ್ದರು. ಬಸವಣ್ಣನವರ ಸಾಮಾಜಿಕ, ಧಾರ್ಮಿಕ ಕಾರ್ಯಗಳಿಗೆ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡಿದ್ದರು. ಬಸವಣ್ಣನವರು ಪೂಜೆಗೆ ಕುಳಿತಾಗ ಮಹಾಮನೆಗೆ ಬಂದ ಅತಿಥಿಗಳನ್ನು ಸತ್ಕರಿಸುವ ಭಾರ ಅಪ್ಪಣ್ಣನವರದಾಗಿತ್ತು. ಬಸವಣ್ಣನವರ ಸೇವೆ ಮುಗಿದಮೇಲೆ ಹಡಪಿಗನ ಕಾಯಕ ಮಾಡುತ್ತಿದ್ದರು. ಕಾಯಕ ಹಡಪಿಗನದಾಗಿದ್ದರೂ ಬಸವಣ್ಣನವರ ಒಡನಾಟದಿಂದ ಅಪ್ಪಣ್ಣ ಮಹಾಶರಣರಾದರು. ಅಪ್ಪಣ್ಣನ ಪತ್ನಿ ಲಿಂಗಮ್ಮ ಪತಿಯ ಆತ್ಮಸಂಗಾತಿಯಾಗಿ ಅನುಭಾವಿಯಾದಳು.

"ಬಸವಣ್ಣ, ಚೆನ್ನಬಸವಣ್ಣ, ಮಡಿವಾಳಯ್ಯ, ಅಲ್ಲಮಪ್ರಭು, ಚೆನ್ನಮಲ್ಲೇಶ್ವರ, ಹಡಪದ ಅಪ್ಪಣ್ಣ, ತಮ್ಮೆಲ್ಲರ ತೊತ್ತಿನ, ಪಡಿದೊತ್ತಿನ ಮಗಳೆಂದು ಹೊತ್ತು ಹೊತ್ತಿಗೆ ಎಚ್ಚರವ ಪಾಲಿಸಿ, ರಕ್ಷಣೆಯ ಮಾಡಿದ ಕಾರಣದಿಂದ ತಮ್ಮೆಲ್ಲರ ಪಾದದಲ್ಲಿಯೇ ನಿಜಮುಕ್ತಳಾದೆನಯ್ಯ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ" ಎಂದು ಲಿಂಗಮ್ಮ ತನ್ನ ಒಂದು ವಚನದಲ್ಲಿ ಹೇಳಿದ್ದಾಳೆ. ಅಧ್ಯಾತ್ಮ ಮಾರ್ಗದಲ್ಲಿ ಮುನ್ನಡೆಯಲು ಮಹಾಮನೆಯ ವಾತಾವರಣ, ಅನುಭವ ಮಂಟಪದ ಶಿವಾನುಭವಗೋಷ್ಠಿ ಲಿಂಗಮ್ಮನಿಗೆ ನೆರವನ್ನಿತ್ತಿತು. ಬಸವಾದಿ ಪ್ರಮಥರ ಬಗೆಗೆ ಲಿಂಗಮ್ಮನಿಗೆ ಅಪಾರ ಭಕ್ತಿ, ಅನುಭಾವವಿಲ್ಲದೆ, ಪುಸ್ತಕ ಪಾಂಡಿತ್ಯದಿಂದ ಅಹಂಭಾವವುಳ್ಳ ಪಂಡಿತರನ್ನು ಕಂಡು ಲಿಂಗಮ್ಮ ಹೀಗೆ ಕೇಳಿದ್ದಾಳೆ "ಮನವ ಗೆದ್ದೆನೆಂದು ತನುವ ಕರಗಿಸಿ. ಕಾಯವ ಮರುಗಿಸಿ ನಿದ್ರೆಯಕೆಡಿಸಿ, ವಿದ್ಯೆಯ ಕಲಿತೆನೆಂಬ ಬುದ್ಧಿಹೀನರಿರಾ ನೀವು ಕೇಳಿರೋ! ನಮ್ಮ ಶರಣರು ಮನವನೆಂತು ಗೆದ್ದರೆಂದರೆ, ಕಾಮ ಕ್ರೋಧವ ನೀಗಿ. ಮದಮತ್ಸರವ ನಿಶ್ಚೈಸಿ, ಆಸೆ ರೋಷವನಳಿದು, ಜಗದ ಪಾಶವ ಬಿಟ್ಟು, ಮರುಗಿಸುವ ಕಾಯವನೆ ಪ್ರಸಾದವ ಮಾಡಿ ಸಲುಹಿದರು. ಕೆಡಿಸುವ ನಿದ್ರೆಯನೆ ಯೋಗಸಮಾಧಿಯ ಮಾಡಿ ಸುಖವ ನಡೆಸಿ, ಜಗವ ಗೆದ್ದ ಶರಣರ ಬುದ್ಧಿಹೀನರೆತ್ತ ಬಲ್ಲರೋ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ"

ಪುಸ್ತಕ ಪಾಂಡಿತ್ಯವನ್ನು ಹೇಗಾದರೂ ಪಡೆಯಬಹುದು. ಆದರೆ ಮನಸ್ಸನ್ನು ಗೆಲ್ಲುವ ಕಾರ್ಯ ಮನುಷ್ಯನಿಗೆ ಕಠಿಣತರವಾಗಿದೆ. ಇಂದಿನ ವಿಜ್ಞಾನ ಯುಗದ ಮಾನವನು ನೀರಿನಲ್ಲಿ ಮೀನಿನಂತೆ ಈಜಬಲ್ಲ, ಸಮುದ್ರದಾಳದಲ್ಲಿ ಮನೆಕಟ್ಟಿ ವಾಸಿಸಬಲ್ಲ; ಹಕ್ಕಿಯಂತೆ ಆಕಾಶದಲ್ಲಿ ಹಾರಬಲ್ಲ; ವಾಯುವೇಗದಲ್ಲಿ ಸ್ಪುಟ್ನಿಕ್ ಮೂಲಕ ಚಂದ್ರಲೋಕ ತಲುಪಿ ಬರಬಲ್ಲ; ಒಂದೇ ಒಂದು ಅಣುಬಾಂಬಿನಿಂದ ಕಣ್ಣು ಮುಚ್ಚಿ ಕಣ್ಣು ತೆರೆಯುವುದರಲ್ಲಿ ಜಗತ್ತನ್ನೇ ನಾಶ

ಮಾಡಬಲ್ಲ. ಬೇಕೆಂದಾಗ ಮಳೆಗರಿಸಬಲ್ಲ. ಅಬ್ಬರದಿಂದ ಹರಿವ ನದಿಗೆ ಅಣೆಕಟ್ಟು ಕಟ್ಟಬಲ್ಲ. ಆ ನೀರಿನಿಂದ ವಿದ್ಯುತ್ತು ಉತ್ಪಾದಿಸಬಲ್ಲ. ಈ ರೀತಿ ಅಸಾಧ್ಯಸಾಧಕನಾದ ಮಾನವನು ಮನವನ್ನು ಏಕಾಗ್ರಗೊಳಿಸಬಲ್ಲನೇ ? ದೈಹಿಕ ಸುಖಸರ್ವಸ್ವವನ್ನು ಸಾಧಿಸಿದ ಮಾನವನಿಗೆ ಇಂದು ಮಾನಸಿಕ ಶಾಂತಿ ಇಲ್ಲವಾಗಿದೆ. ಎಲ್ಲೆಡೆ ಅಶಾಂತಿ, ಅಸಂತೋಷ, ಅತೃಪ್ತಿ ಕಂಡು ಬರುತ್ತದೆ. ಈ ಅತೃಪ್ತಿ ಅಶಾಂತಿ ಅಸಂತೋಷಗಳನ್ನು ದಾಟಿ ಸಮಾಧಾನ, ಸಂತೃಪ್ತಿಯ ಬಾಳನ್ನು ಬಾಳಿದ ಶರಣರ ಜೀವನ ನಮಗಿಂದು ಬೆಳಕನ್ನೀಯಬಹುದಾಗಿದೆ. ಶರಣರು ಮನವನೆಂತು ಗೆದ್ದರೆಂದರೆ ಕಾಮ ಕ್ರೋಧವ ನೀಗಿ, ಮೋಹ ಮದ ಮತ್ಸರಗಳನ್ನು ದೂರ ನೂಕಿ, ಆಶೆ ದೋಷಗಳನ್ನುಳಿದು ಮನವನ್ನು ಏಕಾಗ್ರಗೊಳಿಸಿ ಜಗದ ಪಾಶದಿಂದ ಬಿಡುಗಡೆ ಹೊಂದಿದರಂತೆ. ಈ ದೇಹವನ್ನು ಪ್ರಸಾದಕಾಯವನ್ನಾಗಿ, ನಿದ್ರೆಯನ್ನು ಯೋಗಸಮಾಧಿಯನ್ನಾಗಿಸಿ ಜಗವ ಗೆದ್ದ ಮಾರ್ಗವನ್ನು ಲಿಂಗಮ್ಮ ತನ್ನ ವಚನಗಳಲ್ಲಿ ಸುಂದರವಾಗಿ ನಿರೂಪಿಸಿದ್ದಾಳೆ.

ಮಾನವರು ಹುಲಿಯನ್ನು ಹಿಡಿಯಬಲ್ಲರು. ಕುದುರೆಯನ್ನು ಕಟ್ಟಿ ಹಾಕಬಲ್ಲರು. ಆದರೆ ಹರಿವ ಮನವನ್ನು, ಹಿಡಿದು ನಿಲ್ಲಿಸುವುದು ಕಠಿಣ. ಆ ಕಠಿಣ ಕಾರ್ಯವನ್ನು, ಹಗುರಗೊಳಿಸಿದ ಲಿಂಗಮ್ಮನ ಅನುಭಾವದ ನುಡಿ ಇಂತಿದೆ.

"ಮನವ ನಿರ್ಮಳವ ಮಾಡಿದೆನೆಂದು ತನುವ ಕರಗಿಸಿ, ಮನವ ಬಳಲಿಸಿ ಕಳವಳಿಸಿ, ಕಣ್ಣುಕಾಣದ ಅಂಧಕರಂತೆ ಮುಂದುಗಾಣದೆ ಸಂದೇಹದಲ್ಲಿ ಮುಳುಗಿರುವ ಮನುಜರಿರಾ ನೀವು ಕೇಳಿರೋ ! ಹೇಳಿಹೆನು. ಆ ಮನವ ನಿರ್ಮಳವ ಮಾಡಿ ಆ ಘನವ ಕಾಂಬುವಡಕ್ಕೆ ಮನ ಎಂತಾಗಬೇಕೆಂದರೆ ಗಾಳಿ ಬೀಸದ ಜಲದಂತೆ, ಮೋಡವಿಲ್ಲದ ಸೂರ್ಯನಂತೆ, ಬೆಳಗಿದ ದರ್ಪಣದಂತೆ, ಮನ ನಿರ್ಮಳವಾದಲ್ಲದೆ ಆ ಮಹಾಘನವ ಕಾಣಬಾರದೆಂದರು ನಮ್ಮ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ" ಎಂಬ ಮನಸ್ಸಿನ ಏಕಾಗ್ರತೆಯ ನಿರೂಪಣೆಯನ್ನು ಸ್ಪಷ್ಟಗೊಳಿಸಿದ್ದಾಳೆ ಲಿಂಗಮ್ಮ.

ಅಶಾಂತಿ ಅತೃಪ್ತಿಯ ಜೀವನದಿಂದ ಶಾಂತಿ ಸಂತೃಪ್ತಿಯ ಜೀವನ ನಡೆಸಲು ಮನದ ನೆಮ್ಮದಿ ಮುಖ್ಯ. ಮನದ ನೆಮ್ಮದಿಗೆ ಅರಿಷಡ್ವರ್ಗಗಳನ್ನು ಗೆಲ್ಲಬೇಕು. ದೇವರು ಇರುವನೋ ಇಲ್ಲವೋ ಎಂಬ ಸಂದೇಹವನ್ನು ನೀಗಿ ದೈವೀ ಶಕ್ತಿಯಲ್ಲಿ ಅಚಲ ಶ್ರದ್ಧೆಯನ್ನಿರಿಸಬೇಕು. ಆ ರೀತಿ ಶ್ರದ್ಧೆ ಬೆಳೆಯಲು ಮನ ಏಕಾಗ್ರಗೊಂಡು ದೇವರ ಧ್ಯಾನದಲ್ಲಿ ಲೀನವಾಗಬೇಕು. ಮನ ಗಾಳಿ ಬೀಸದ ಜಲದಂತಿರಬೇಕು. ಗಾಳಿ ಬೀಸದ ಜಲದ ಕಲ್ಪನೆ ನಳದ (ನಲ್ಲಿಯ) ನೀರು ಕುಡಿಯುವ ಇಂದಿನ ಜನಕ್ಕೆ ಅರಿವುದೂ ಕಠಿಣ. ಜಲಾಶಯಗಳಿಂದ ನೀರನ್ನು ಹೊತ್ತು ತರುವವರು, ಗಾಳಿ ಬೀಸದ ಜಲ ಸ್ತಬ್ಧವಾಗಿರುವುದನ್ನು ಅರಿಯಬಹುದಾಗಿದೆ. ಸ್ತಬ್ಧವಾದ ಮನ, ಮೋಡವಿಲ್ಲದ ಸೂರ್ಯನ ಪ್ರಕಾಶದಂತೆ ಪ್ರಕಾಶಮಾನವಾಗಬೇಕು. ಹಿಂದಿನ ಕಾಲದಲ್ಲಿ ಮುಖನೋಡಿಕೊಳ್ಳಲು ಕನ್ನಡಿಗಳಿರಲಿಲ್ಲ. ಕಂಚಿನ ತಟ್ಟೆಯನ್ನು ಶುಭ್ರವಾಗಿ ಬೆಳಗಿ ದರ್ಪಣದಂತೆ ಉಪಯೋಗಿಸುತ್ತಿದ್ದರು. ಅದಕ್ಕಾಗಿ ಲಿಂಗಮ್ಮ ಮನಸ್ಸು ಬೆಳಗಿದ ದರ್ಪಣದಂತೆ ಶುಭ್ರವಾಗಿರಬೇಕೆಂದು ಎಚ್ಚರಿಸಿದ್ದಾಳೆ. ಮನಸ್ಸು ಗಾಳಿ ಬೀಸದ ಜಲದಂತೆ ಸ್ತಬ್ಧವಾಗಿರಬೇಕು. ಮೋಡವಿಲ್ಲದ ಸೂರ್ಯನಂತೆ ಪ್ರಜ್ವಲಿಸುತ್ತಿರಬೇಕು. ಬೆಳಗಿದ ದರ್ಪಣದಂತೆ ನಿಷ್ಕಲ್ಮಷವಾಗಿರಬೇಕು. ಆಗ ಮಾನವನು ತನ್ನ ಮಾನಸಸ್ತರದಿಂದ ಅತಿಮಾನಸ ಸ್ತರದ ಎತ್ತರವನ್ನು ತಲುಪಬಲ್ಲ. ಲಿಂಗಮ್ಮನ ಅನುಭಾವದ ನುಡಿಯಂತೆ ನಾವು ನಮ್ಮ ಮನವನ್ನು ಏಕಾಗ್ರಗೊಳಿಸುವಲ್ಲಿ ಜಯಶೀಲರಾದರೆ, ಆ ಮಹಾಘನ ಜ್ಯೋತಿಯನ್ನು ಈ ಲೋಕದಲ್ಲಿಯೇ ಕಾಣಬಲ್ಲೆವು. ಆಗ ನಮ್ಮ ಜೀವನ ಶಾಂತಿ, ಸಮಾಧಾನ, ಸಂತೃಪ್ತಿಯ ಆಗರವಾಗಬಹುದು.

# ಗುರೋಸ್ತು ಮೌನಂ ವ್ಯಾಖ್ಯಾನಂ

ಪ್ರೊಫೆಸರ್ —ಬಿ. ಹೆಚ್. ಶ್ರೀಧರ್.

ಶ್ರೀ ಅರವಿಂದಮಹರ್ಷಿಗಳು ಇತರ ಅನೇಕ ವೇದಾಂತಿಗಳಂತೆ 'ಜಗತ್ ಸತ್ಯ, ಮಿಥ್ಯೆಯಲ್ಲ'' ಎಂದಿದ್ದಾರೆ. ಅಸ್ತಿತ್ವಮಾತ್ರ ನಿರ್ದೇಶಕವಾದ ಸತ್ಯತೆ ಜಗತ್ತಿಗಿದೆ ಎಂಬುದು ಜಗತ್ತನ್ನು ಮಿಥ್ಯೆ ಎಂದು ನಂಬುವವರಿಗೂ ಗೊತ್ತು.

ಹಾಗೇ ನಿತ್ಯಸತ್ಯತೆ ಅಥವಾ ನಿತ್ಯಾಸ್ತಿತ್ವ ಎಂಬ ಲಕ್ಷಣವುಳ್ಳ ಬ್ರಹ್ಮಸತ್ಯತೆಯೂ ವೇದಾಂತಿಗಳಲ್ಲಿ ಅವಿವಾದಾಸ್ಪದ. ಬ್ರಹ್ಮನಿಂದ ಭಿನ್ನವಾದ ಜಗತ್ತು ಅವನ ಇಚ್ಛೆಯಂತೆ ಹೇಗೆ ಹುಟ್ಟಿತು? ಎಂಬ ಸಮಸ್ಯೆಯು ಬ್ರಹ್ಮನು ಸೃಷ್ಟಿಕರ್ತನಲ್ಲ ಎನುವ ವೇದಾಂತಿಗಳಿಗಿಲ್ಲ. ಆದರೆ ಬ್ರಹ್ಮನಿಂದ ಭಿನ್ನವಾದ ಮೂಲ ಪದಾರ್ಥಗಳು ಬ್ರಹ್ಮನಂತೆಯೇ ಅನಾದ್ಯನಂತವಾಗಿ ಇರುತ್ತವೆ ಎಂದರೆ ಅದರಿಂದ ಬ್ರಹ್ಮನ ಪೂರ್ಣತೆಗೆ ಭಂಗ ಬರುತ್ತದೆ ಎಂಬ ಸಮಸ್ಯೆ ಅವರನ್ನು ಕಾಡಿಸುತ್ತದೆ.

'ಎಲ್ಲವೂ ನಶ್ವರ, ಬ್ರಹ್ಮಕೂಡ ನಶ್ವರ' ಎಂಬ ವಾದಿಗಳ ವಾದಕೂಡ ನಶ್ವರ. ಆದುದರಿಂದ ಅದಕ್ಕೆ ಯಾರೂ ಉತ್ತರ ಕೊಡುವ ಅಗತ್ಯವಿಲ್ಲ. ಯಾವ ವಿಧ ಅಜ್ಞಾನ (Inconscience) ದಿಂದ ಜ್ಞಾನ (Consciousness) ಹೇಗೆ ಮತ್ತು ಏಕೆ ಹುಟ್ಟಿತು? ಅಥವಾ ತದ್ವಿರುದ್ಧವಾಗಿ ಸರ್ವಜ್ಞನಾದ ಬ್ರಹ್ಮನಿಂದ ಅಜ್ಞಾನಸಹಿತವಾದ (ಅಜ್ಞಾನವನ್ನು ಅಲ್ಪಜ್ಞಾನವೆಂದೇ ತಿಳಿದಾಗಲೂ) ಜಗತ್ತು ಹೇಗೆ ಹುಟ್ಟಿತು? ಅಥವಾ ಹುಟ್ಟದೇ ಇದ್ದರೂ ಇದನ್ನವನು (ಹೇಗೆ ಎಂದಲ್ಲದಿದ್ದರೂ) ಏಕೆ? (ಇದು ಅನೇಕ ನ್ಯೂನತೆಗಳಿಂದ ಕೂಡಿದ್ದರೂ) ಹೀಗೇ ಉಳಿಸಿದ್ದಾನೆ? ಎಂದು ಕೇಳಬೇಕಾಗುತ್ತದೆ. ಬ್ರಹ್ಮನು (ಸಚ್ಚಿದಾನಂದ, ಶಿವಪರಬ್ರಹ್ಮ) ಸರ್ವಶಕ್ತನೋ? ಅಲ್ಲವೋ? ಸರ್ವಶಕ್ತನಾದರೆ ನಿರ್ದಯನೆಂದೂ ಅಲ್ಲವಾದರೆ ಅಪೂರ್ಣನೆಂದೂ ಹೇಳಬೇಕಾಗುತ್ತದೆ. ಲೀಲಾವಾದವು ಬ್ರಹ್ಮಕಾರ್ಯಕ್ಕೆ ಸಮರ್ಥನೆ ಕೊಡುತ್ತದೆ. ಲೀಲೆಯಲ್ಲವಾದರೆ ಅವನ ಸ್ವಭಾವವೆಂದರೆ ಆಗ ಸ್ವಭಾವ ಅಷ್ಟೇನು ಸಮರ್ಪಕವಲ್ಲವೆಂದು ಹೇಳಬೇಕಾಗುತ್ತದೆ. ಈ ಜಗತ್ತನ್ನು ಯಾರೂ ಸರ್ವಸಮರ್ಪಕ ಎಂದು ಹೇಳಿಲ್ಲ; ಹೇಳಲಾರರು.

ಇನ್ನು ಬ್ರಹ್ಮನ ಜಾಗದಲ್ಲಿ ನಿಸರ್ಗ (Nature) ವನ್ನಿಟ್ಟು ವಾದಿಸಿದರೂ ಮೇಲಿನ ಪ್ರಶ್ನೆಗಳೇ ಏಳುತ್ತವೆ. ಜಡದಿಂದ ಜೀವ (ಅಜ್ಞಾನದಿಂದ ಜ್ಞಾನ) ಹುಟ್ಟಬಹುದಾದರೆ ಜೀವದಿಂದ ಜಡ (ಜ್ಞಾನದಿಂದ ಅಜ್ಞಾನ) ಹುಟ್ಟಬಹುದು. ಹಾಗಲ್ಲದೆ ಅವು ನಿತ್ಯವೂ ಪ್ರತ್ಯೇಕ ಪದಾರ್ಥಗಳೆಂದರೆ ಅವುಗಳ ಸಂಮಿಶ್ರಣವಾಗಿರುವ ಈ ಪ್ರಪಂಚದ ಜೀವನಕ್ಕೆ ಅರ್ಥ ಹೇಳುವುದು ಕಷ್ಟವಾಗುತ್ತದೆ. ಆದುದರಿಂದಲೇ ಅಭೇದ, ಭೇದಾಭೇದ ಮತ್ತು ಭೇದ ವಾದಗಳು ವೇದಾಂತದಲ್ಲಿ ಹುಟ್ಟಿಕೊಂಡವು. ಶ್ರೀ ಅರವಿಂದರ ಸಮಗ್ರಾದ್ವೈತವಾದವೂ ವಿಶಿಷ್ಟಾದ್ವೈತವಾದದಂತೆಯೇ ಸರ್ವವಾದಗಳ ಸಮನ್ವಯವನ್ನು ಸಾಧಿಸ ಹೊರಟು ಅಷ್ಟೇ ಯಶಸ್ವಿಯಾಗಿದೆ. ಶಕ್ತಿವಿಶಿಷ್ಟಾದ್ವೈತವೆಂಬುದು

ವಿಶಿಷ್ಟಾದ್ವೈತಕ್ಕಿಂತ ಭಿನ್ನವಾದರೂ ಅದ್ವೈತಕ್ಕಿಂತ ಭಿನ್ನವೆಂಬ ಆತ್ಯಂತಿಕತೆ ಅದಕ್ಕಿಲ್ಲ.

ಶ್ರೀ ಅರವಿಂದರ ಸಮಗ್ರಾದ್ವೈತವೂ ಮಾಯೆಗೆ (ವಿವರ್ತ) ಬದಲು ಪರಿವರ್ತನ (ಪರಿಣಾಮವಲ್ಲ) ವಾದವನ್ನು (Transformatiou) ವಿಕಾಸ ಮತ್ತು ಸಂಕೋಚವಾದವೆಂದು (Evolution and Devolution or Involution) ನಮ್ಮ ಮುಂದಿಟ್ಟದ್ದಾರೆ. ಅಪ್ರಮೇಯತೆಗೇರಿಸುವುದು ಮತ್ತು ಪ್ರಮೇಯತೆಗಿಳಿಸುವುದು ( Infinition and Finitsation) ಅವರು ಕೊಟ್ಟ ಸೃಷ್ಟಿ-ಸ್ಥಿತಿ-ಲಯಾದಿಗಳ ವಿವೇಕ ಸಚ್ಚಿದಾನಂದನ ಅವತರಣ ಮತ್ತು ಉತ್ತರಣಗಳು, ಅವನು ಸ್ವಬದ್ಧತೆಯನ್ನು ತನಗೆ ತಾನೇ ತಂದುಕೊಳ್ಳುವುದರ ಉದ್ದೇಶ ಗೊತ್ತಿಲ್ಲ. ವಿಕಾಸ ಅಥವಾ ಮುಕ್ತಿಯೇ ಅದರ ಉದ್ದೇಶವೆಂದರೆ ಅವನಿಗೆ ಮೊದಲು ಮುಕ್ತಿಸ್ಥಿತಿಯ ಅರಿವು ಇದ್ದಿದ್ದಿಲ್ಲ ಎನ್ನಬೇಕಾಗುತ್ತದೆ. ಹಾಗಲ್ಲದೆ ಅವನು ಮೊದಲು ಮುಕ್ತನಾಗಿದ್ದರೆ ಆಮೇಲೆ ಮುಕ್ತಿಯಿಂದ ಅತೃಪ್ತನಾಗಿ ಬದ್ಧತೆಗಿಳಿದನು ಎನ್ನಬೇಕಾಗುತ್ತದೆ. ಅಲ್ಲದೆ, ಅವನು ಪೂರ್ಣವಾಗಿ ಬದ್ಧತೆಗಿಳಿಯುವುದೂ (ಅನೇಕನಾಗುವುದೂ) ಅನಂತರ ಪೂರ್ಣವಾಗಿ ಏಕತ್ವಕ್ಕೆ ಮುಟ್ಟುವುದೂ ನಂಬಲಸಾಧ್ಯವಾಗುತ್ತದೆ.

ಹಾಗಲ್ಲದೆ, ಇನ್ನು ಭಾಗಶಃ ಹಾಗಾಗುತ್ತಾನೆ ಅಥವಾ ಹೀಗಾಗುತ್ತಾನೆ ಎಂದರೆ ಅವನ ಪೂರ್ಣತೆಯು ಅನಿತ್ಯ ಅಥವಾ ಅವನೇ ಅನಿತ್ಯನಾಗಬೇಕಾಗುವುದು. ಆದುದರಿಂದ ಬ್ರಹ್ಮನ ಸರ್ವಾಂಗಿಕ ಪೂರ್ಣತೆಗೆ ಚ್ಯುತಿ ಬರದಿರಬೇಕೆಂದೇ ಶ್ರೀ ಶಂಕರಾಚಾರ್ಯರು ಜಗತ್ತು ಬ್ರಹ್ಮನ ವಿವರ್ತ (Apparent Expansion) ಎಂದು ಉಪನಿಷದರ್ಥವನ್ನು ಉಳಿಸಿದರು. ಬಹ್ಮನ ಪೂರ್ಣತೆಯನ್ನು ಯಾವ ವಿಶೇಷಣದಿಂದಲಾದರೂ ಅಲ್ಪವಾದರೂ ಕೊರತೆಗೊಳಿಸಿದರೆ, ಉಪನಿಷತ್ತಿನ ಬ್ರಹ್ಮನ ಸರ್ವಾರಾಧ್ಯತೆ, ಸರ್ವಜ್ಞತೆ, ಸರ್ವಶಕ್ತಿಮತ್ತೆ, ಸರ್ವವ್ಯಾಪಕತ್ವಗಳಿಗೆ ಚ್ಯುತಿಬರುತ್ತದೆ. ಜೊತೆಗೆ ದೇಶಕಾಲಾತೀತ ಬ್ರಹ್ಮನನ್ನು ಒಳ-ಹೊರ ಮೇಲು-ಕೀಳು, ಸ್ವ-ಪರ ಮುಂತಾದ ಪದಗಳ ಅರ್ಥಗಳಿಂದ ನಿತ್ಯವಾಗಿ ಪರಿಚ್ಛೇದಿಸುವುದು ಬ್ರಹ್ಮಾರ್ಥಕ್ಕೆ ಚ್ಯುತಿಯನ್ನುಂಟುಮಾಡುವುದು. ಬ್ರಹ್ಮನಲ್ಲಿ ಸಾಧ್ಯವಾದ ದೇಶಕಾಲಗಳೂ ಇಲ್ಲ. ಇಲ್ಲದಲ್ಲಿ ಅವುಗಳನ್ನು ಊಹಿಸಿ ಅವನನ್ನು ವಿಭಜಿಸ ಹೋಗುವುದು ಶಶವಿಷಾಣಸದೃಶವಾದ ಕಲ್ಪನೆಯಾಗಿ ಹೋಗುತ್ತದೆ. ಗುಣ, ಕ್ರಿಯೆ, ದ್ರವ್ಯಗಳ ಅರ್ಥಗಳನ್ನುಳ್ಳ ಯಾವುದೇ ಪದದಿಂದ ಬ್ರಹ್ಮನ ಅರ್ಥವನ್ನು ನಿಷ್ಕೃಷ್ಟಗೊಳಿಸಹೋದರೂ ಅದರಿಂದ ಬ್ರಹ್ಮನ ಬೃಹತ್ವಕ್ಕೆ ಭಂಗ ಉಂಟಾಗುತ್ತದೆ.

ಇನ್ನು, ಸರ್ವಾಧಿಕ ಇಚ್ಛಾಶಕ್ತಿ ಸಂಪನ್ನನಾದ ಬ್ರಹ್ಮನು ಬೇಕಾದುದನ್ನು ಮಾಡುತ್ತಾನೆ, ಬೇಕಾದ ಹಾಗೆ ಮಾಡುತ್ತಾನೆ ಎಂದರೆ ಅವನು ಏನನ್ನು ಮಾಡಿಕೊಂಡರೂ, ಏನೇ ಆದರೂ ತನ್ನತನಕ್ಕೆ ಚ್ಯುತಿಯನ್ನು ತಂದುಕೊಳ್ಳಲಾರನು. ಅವನ ಸ್ವಭಾವವು ಪೂರ್ಣತೆ-ನಿತ್ಯಪೂರ್ಣತೆ ತಾತ್ಕಾಲಿಕ ಅಥವಾ ತಾದ್ದೇಶಿಕ ಪೂರ್ಣತೆಯಲ್ಲ. ಅದನ್ನೆಂದೂ ಭಂಗಗೊಳಿಸಿಕೊಳ್ಳಲಾರನು. ಅದನ್ನೂ ಭಂಗಗೊಳಿಸಿಕೊಳ್ಳುತ್ತಾನೆ ಎಂಬುದಾದರೆ ಅವನಿಗೆ ಜಗತ್ತಿಗಿಂತ ಹೆಚ್ಚಿನ ಬೆಲೆ ಬರಲಾರದು. ಆಗ ಅವನೋ, ಅವನ ಜಗದಿತರ ಲೋಕವೋ, ಸಾನ್ನಿಧ್ಯವೋ ಬಹಳ ಅಪೇಕ್ಷಣೀಯವೆನ್ನಿಸಲಾರದು. ಏಕೆಂದರೆ ಅವನೂ ಅಪೂರ್ಣ, ಜಗತ್ತೂ ಅಪೂರ್ಣ ! ಮುಕ್ತಿಯೂ ಒಂದೇ ಬಂಧವೂ ಒಂದೇ ಆದೀತು !

ಮಾಯೆಯು ಬ್ರಹ್ಮಪದದಲ್ಲಿ ಅರ್ಥಾಂಶವನ್ನು ಉಳಿದ್ದಾಗಿಲ್ಲ. ಬ್ರಹ್ಮೈಕ್ಯ ಹೊಂದದವರಿಗೆ ಬ್ರಹ್ಮಪದವು ಕೇವಲ ಪದ (Word). ಅವರ ದೃಷ್ಟಿಯಲ್ಲಿ "ಮಾಯೆ ಇದೆ, ಬ್ರಹ್ಮನಿಲ್ಲ ಮಾಯೆ (Matter, Nature as opposed to Spirit) ಅನಿರ್ವಚನೀಯ, ಹೇಳಲು ಬಾರದ ಸ್ವಭಾವವುಳ್ಳದ್ದು" (Mysterious or miraculous Power) "ಮ್ಯಾಜಿಕ್"ನಂಥ ಅದ್ಭುತ ಶಕ್ತಿ ಎಂಬುದು ಬ್ರಹ್ಮ ಮತ್ತು ಮಾಯೆಗಳೆರಡರ

# ಗುರೋಸ್ತು ಮೌನಂ ವ್ಯಾಖ್ಯಾನಂ

ಅಸ್ತಿತ್ವವನ್ನು ಏಕಕಾಲದಲ್ಲಿ ಒಪ್ಪಿಕೊಳ್ಳುವ ವಾದಿಯ ದೃಷ್ಟಿಯಿಂದ ಅವಶ್ಯಕ.

ಜಗತ್ತಿನ ಮೂಲದ್ರವ್ಯವು (WORLD-Stuff) ಆಧುನಿಕ ವಿಜ್ಞಾನೋಕ್ತವಾಗಿ ಗುಣ ಅಥವಾ ಘಟನೆಗಳ ಇಲ್ಲವೆ ಗಾಣಿತಿಕ ಕುಟ್ಟಕಗಳ ಸಮುಚ್ಚಯ (ಸಮಾಹಾರ) (A bundle of qualities or events or mathematical equalities) ಅಥವಾ ಸತತ ಚಂಚಲವಾದ ಶಕ್ತಿ (Energy) ಎಂದಾಗಿರುವುದರಿಂದ ಅದರ ಮೂಲವು ಗೊತ್ತಿಲ್ಲ; ಜ್ಞಾನ ಶೂನ್ಯವಾದ ಅದೇ ಏನೇನನ್ನೋ ಮಾಡುತ್ತದೆ ಎಂಬುದು ಅರ್ಥವಾಗದು. ಅದರಿಂದ ಅದು ಅನಿರ್ವಚನೀಯ ಮೂಲವುಳ್ಳದ್ದು; ಬ್ರಹ್ಮನ (ಮುಕ್ತನ) ದೃಷ್ಟಿಯಿಂದ ಅದು (ಮಾಯೆ) ಶೂನ್ಯವಲ್ಲದಿದ್ದರೂ ಶೂನ್ಯಸಮವಾದದ್ದು. ಅದಕ್ಕೆ ಬ್ರಹ್ಮನ ಪೂರ್ಣತೆಯನ್ನೂ, ಶುದ್ಧತೆಯನ್ನೂ, ಅಖಂಡತೆಯನ್ನೂ, ಅಜಾತೀಯತೆಯನ್ನೂ, ನಿತ್ಯತೆಯನ್ನೂ, ಕೊರತೆಗೊಳಿಸುವ ಶಕ್ತಿಯಿಲ್ಲ. ಅದು ಬ್ರಹ್ಮಾಂತರ್ಗತವಾಗಿ ಹೇಗಿದೆಯೋ ಗೊತ್ತಿಲ್ಲ. ಅದು ಬ್ರಹ್ಮರಹಸ್ಯ, ಚಿದಂಬರ ರಹಸ್ಯ. ಯಾವ ಸಾಕ್ಷಾತ್ಕಾರಿಯ, ಅನುಭಾವಿಯ, ಅವತಾರಿಯ, ಯೋಗಿಯ, ಬ್ರಹ್ಮರ್ಷಿಯ, ಪ್ರವಾದಿಯ, ಜೀವನ್ಮುಕ್ತನ ಅಥವಾ ದೇವನ ಮಾತುಗಳೂ ಆ ರಹಸ್ಯವನ್ನು ಭೇದಿಸಿಲ್ಲ. ಉಪನಿಷತ್ತುಗಳು ಹೇಳುವುದು ಅತ್ಯಂತ ಸ್ಪಷ್ಟವಾಗಿ ಉಕ್ತ ಪೂರ್ಣಬ್ರಹ್ಮನನ್ನಲ್ಲದೆ ಅಪೂರ್ಣಬ್ರಹ್ಮನನ್ನಲ್ಲ ಎಂಬುದನ್ನು ಯಾರೂ ಅಲ್ಲಗಳೆಯಲಾರರು. ಬ್ರಹ್ಮನು ಯಾವುದರಿಂದಲೂ ಅಲುಪ್ತನಾಗಬೇಕಾದರೆ ಯಾವುದರಿಂದಲೂ ಅಲಿಪ್ತನಾಗಿರಬೇಕು. ಅದರಿಂದಲೇ ಅವನು "ನಿರ್ಗುಣ" ಎಂದು ಸಂಕೇತಿಸಲ್ಪಟ್ಟಿದ್ದಾನೆ. ಅವನ ಗುಣ ಅವನಿಗೇ ಗೊತ್ತು. ನಾವು ಹೇಳಹೋದರೆ ಅವನ ಪೂರ್ಣತೆಗೆ ಚ್ಯುತಿಯನ್ನು ಹೇಳಿದಂತಾಗುವುದು.

ಗುಣ, ದ್ರವ್ಯ, ಧರ್ಮ, ಉಪಾಧಿ ಮತ್ತು ಅವಚ್ಛೇದಕಗಳಲ್ಲಿ ಎಲ್ಲವೂ ಬ್ರಹ್ಮಪದಕ್ಕೆ ಪರಿಮಿತಿ ಹಾಕಬಲ್ಲವು. ಆದ್ದರಿಂದ ಬ್ರಹ್ಮನಿಗೆ ಬ್ರಹ್ಮತ್ವ ಪೊಂದೇ ಶಾಬ್ದಿಕವಾದ (ಸಂಕೇತಾತ್ಮಕ) ಅವಚ್ಛೇದಕ (Delimiting Factor). ಉಳಿದೆಲ್ಲವೂ ಅವನ ಅಪ್ರಮೇಯತೆಗೆ ಮಿತಿಯನ್ನು ಕಲ್ಪಿಸುತ್ತವೆ. ಗುಣದೋಷ ಮುಂತಾದ ದ್ವಂದ್ವಗಳೆಲ್ಲವೂ ಅಪೂರ್ಣ ಜಗತ್ತಿನ ಸಾಪೇಕ್ಷ ಪದಾರ್ಥಗಳು. ಸರ್ವತಂತ್ರ ಸ್ವತಂತ್ರನಾದ ಬ್ರಹ್ಮನು ಸರ್ವನಿರಪೇಕ್ಷ (Absolute) ಏಕಾದಿ ಸಂಖ್ಯೆಗಳಿಂದಲೂ ಸಾಪೇಕ್ಷ ನಿರಪೇಕ್ಷ ಪದಗಳಿಂದಲೂ ಲೌಕಿಕವಾದ ಸರ್ವಪದ ಪದಾರ್ಥಗಳಿಂದಲೂ ಅವನು ಮುಕ್ತ, ಅಲಿಪ್ತ ಅಲೌಕಿಕ, ಅತೀಂದ್ರಿಯ, ಅಪ್ರಮೇಯ, ಅನುಪಾಹಿತ. ಅನವಚ್ಛಿನ್ನ.

ಪದಪ್ರಯೋಗಗಳೆಲ್ಲವೂ ಲೌಕಿಕವಾದ ಭೇದಕಾರಕ ಅವಚ್ಛೇದಕಗಳು, ಸ್ವ-ಪರ ವ್ಯಾವರ್ತಕಗಳು. ಅವೆಲ್ಲಾ ಬೌದ್ಧಿಕ-ವಿಭಾಜಕ ಬುದ್ಧಿಯ ಫಲಗಳು. ಅದುದರಿಂದ ಶ್ರೀ ಅರವಿಂದರ ಹೊಸ ವ್ಯಾಖ್ಯೆಯಲ್ಲಿ ಸಹ ಶಾಂಕರವ್ಯಾಖ್ಯಾನುಸಾರವಾಗಿ ಬ್ರಹ್ಮ ಸೂತ್ರಗಳನ್ನು ಅರ್ಥಮಾಡಲು ಹೊರಟವರಂತೆಯೇ ಮುಗ್ಗರಿಸುವ ಸ್ಥಳಗಳಿವೆ. ತಾರ್ಕಿಕ, ಮಾನಸಶಾಸ್ತ್ರೀಯ ಅಥವಾ ಇನ್ನಾವ ಮಾನುಷ ಮಾಧ್ಯಮವಾದ ಪರಿಭಾಷೆಯ ಮೂಲಕ ಹೇಳ ಹೋದರೂ ಬ್ರಹ್ಮನ ಸ್ವಪದಗತವಾದ ನಿಃಸೀಮತೆಯ ಅರ್ಥಕ್ಕೆ ಸೀಮಾರೇಖೆಯನ್ನು ಎಳೆಯ ಹೊರಟಂತಾಗುವುದು. ಅದುದರಿಂದಲೇ

"ಗುರೋಸ್ತು ಮೌನಂ ವ್ಯಾಖ್ಯಾನಂ
ಶಿಷ್ಯಾಃ ಸ್ಯಾಚ್ಛಿನ್ನಸಂಶಯಾಃ"

ಎಂಬ ಪ್ರಸಿದ್ಧಿಯು ಇಂದಿಗೂ (ಬ್ರಹ್ಮವಿಷಯದಲ್ಲಿ) ಅಪ್ರತಿಹತವಾದ ಮಾತಾಗಿದೆ.

॥ ಓಂ, ತತ್, ಸತ್ ॥

# ಮಣ್ಣಿನ ಮಕ್ಕಳ ಮೋಜಿನ ಸರಣಿ

## ಮದುವೆಯ ಹಾಡು.

ಸಂಗ್ರಹಕಾರರು: ಕೆ. ವಿರೂಪಾಕ್ಷಗೌಡ ಹಾಡಿದವರು: ಬಿ. ಕೊಟ್ರಮ್ಮ

ಹತ್ತಿಯ ಮರ ಕಡಿದು ಬಿಚ್ಚಿ ಹಂದರ ಹಾಕಿ
ಹತ್ತುಮಂದಿ ಗಣಂಗಳು ಕೂಡಿ ಸುರುಗಿ ಸೂತ್ರವ ಹಿಡಿದು
ಮದುವಿ ಮಾಡಿದರು। ಲಿಂಗಯ್ಯಾಗೆ ಮದ್ವಿಮಾಡಿದರು ॥ಪ॥

ಆಲದ ಮರ ಕಡಿದು ಸೀಳಿ ಹಂದರ ಹಾಕಿ
ಆರುಮಂದಿ ಗಣಂಗಳು ಕೂಡಿ ಸುರುಗಿ ಸೂತ್ರವ ಹಿಡಿದು
ಹತ್ತುವರುಷದ ಮಗಳಿಗೆ ಹತ್ತಿ ಕಂಕಣ ಕಟ್ಟಿ
ಅತ್ತಗಿಂದ ಬ್ರಹ್ಮ ಬಂದು ಹಚ್ಚಡಕೆ ನಂದಿ ಬರೆದು ॥

ಅಕ್ಕಿ ಹಾಸೇವು ಒಯ್ದು, ರತ್ನದ ಉಡಿ ತುಂಬಿ
ನೀಲಮಂಟಪದೊಳು ಲೋಲ್ಯಾಡೋ ಲಿಂಗಯ್ಯಾಗೆ ॥
ಪಂಚಗಳಸವನೂಡಿ ಪಾವಾಡ ಮೇಲ್ಗಟ್ಟಿ
ನಾವು ಐದು ಮಂದಿ ಶಿವಶರಣರ ನಿಬ್ಬಣದಾಗ ॥

ಶಿರಕ ಸಾಸುವೆಯಿಟ್ಟು ಶಿರಕ ತಾಳಿಯ ಕಟ್ಟಿ
ಗುರುಮೂರ್ತಿ ಚರಮೂರ್ತಿ ಚೆಲುವ ಗಂಡಯ್ಯನಿಗೆ
ಮದುವೆಯ ಮಾಡಿದರು............

---

### 'ಶ್ರೀ' ಗೆ

ಪ್ರೇಮದ ರುಚಿಯನು ಬೀರುತ ಎಲ್ಲೆಡೆ
ಭಕುತಿಯ ಯೋಗದಿ ಬೆರೆದಿಹನು
ಜನಸಾಮಾನ್ಯರ ಕಷ್ಟದ ಬೇಗೆಯ
ತಪ್ಪಿಸೆ ಅಮೃತವ ಕರೆದಿಹನು.

ಮರವೆಯ ಕತ್ತಲೆ ಒಸಿರಲಿ ಅರಿವಿನ
ರವಿಯೆನೆ ಅವ ತಾ ಮೂಡಿಹನು.
ತಾಮಸ ಮತ್ತಿಂ ಮಲಗಿದ ಜನರಿಗೆ
ಗಾತ್ಮಾಗ್ನಿಯ ಹೋಳಿ ಹರಿಸಿಹನು.

ಸಿದ್ಧಲಿಂಗನಾ ಸನಿಹದಿ ಶಿವಪದ
ವನುದಿನ ನೆನಪಲಿ ತರುತಿಹನು
ಅಂತಹ ಯೋಗಿಗೆ ನುಡಿಹೂವಿದನಾ
ನರ್ಪಿಸಿ ಧನ್ಯನು ಎನಿಸುವೆನು.

—'ಕೋರಂಬು'

# ಕಾವ್ಯವಾಹಿನಿ

## ★ ಅಮೃತದಿಂದ ★

—ಅರ್ಚಕ ವೆಂಕಟೇಶ

೧

ಅಮೃತದಿಂದ ತುಂಬಿದಂಥ
ಸರೋವರವು ಮನ್ಮನ!
ಅಲ್ಲಿ ಎಲ್ಲ ಪಾವನ !
ನೈರ್ಮಲ್ಯವನುಳಿದ ಮಾತು—
ಸುಳಿಯದಂಥ ಸಿರಿವನ !



೨

ಶಿಳಸೀರಿನ ಕನ್ನಡಿಯಲಿ
ಅಂತರಂಗ ಕಾಂಬುದು!
ಬೆಳಕು ಬಂದು ನಿನ್ನಡಿಯಲಿ
ಮಿಂಚಿನಂತೆ ನಿಲುವುದು !



## ಭಾರತೀಯರೆಲ್ಲರೊಂದೆ

ಭಾರತೀಯರೆಲ್ಲರೊಂದೆ ಭರತ ಮಾತೆ ಮಕ್ಕಳು
ಬಾಳರಂಗ ನಡೆಸಲು ಭಾಗವಹಿಸೊ ಪ್ರಜೆಗಳು
ಭೇದಭಾವವೇಕೆ ಈಗ ಇಲ್ಲಿ ನಮ್ಮೊಳು ?
ಬಾಳ ಬೆಳಕ ಚೆಲ್ಲುತ ಭುವನದೊಳಗೆ ಸಾಗುವ
ಭುವನದೊಳಗೆ ಸಾಗುವ ||

ಭಾಷೆ ಯಾವುದಾದರೇನು ?
ಭಾವನೆಗಳು ಎಲ್ಲ ಒಂದೆ !
ಪಕ್ಷಪಾತ ವಹಿಸದೆ, ಪರರ ಮನವ ನೋಯಿಸದೆ
ಪುಣ್ಯನಾಡದೀವಿಗೆಗೆ ಎಣ್ಣೆ ನಾವೇ ಆಗುವ||
ಎಣ್ಣೆ ನಾವೇ ಆಗುವ

ನಿಯಮವಾವುದಾದರೇನು ?
ನೀತಿಯೊಂದೆ, ಒಂದೆ !
ಕೊಂಕು ಬಿಂಕವೆಲ್ಲ ತೊರೆದು ಕರುಣೆಯೆಂಬ
ಖಡ್ಗ ಹಿಡಿದು
ನಾಡಕೀರ್ತಿ ಬೆಳೆಸುವ ನಯ ವಿನಯದೆ ಬಾಳುವ
ನಯ ವಿನಯದೆ ಬಾಳುವ ||

ಜಾತಿಯಾವುದಾದರೇನು ?
ಜ್ಯೋತಿ ನಮ್ಮದೊಂದೆ ।
ಕಟ್ಟಳೆಯನು ಮೀರದಂತೆ ಕಾಯಕವಾ ಸಲ್ಲಿಸುತ್ತ
ತಾಯ್ನಾಡ ಮಕ್ಕಳಾಗಿ ಒಂದಾಗಿ ಬೆಳೆಯುವಾ
ಒಂದಾಗಿ ಬೆಳೆಯುವಾ ||

ಪದವಿ ಯಾವುದಾದರೇನು ?
ಸೇವೆಗೈಯ್ಯಲೊಂದೆ ।
ಸತ್ಯ ಶಾಂತಿ ಧರ್ಮಗಳ ಪರಿಪಾಲಿಸಿ ಪಾಲ್ಗೊಳ್ಳುತ
ತಾಯ್ನಾಡಿನ ಒಗ್ಗಟ್ಟಿಗೆ ಶಾಂತಿ ಬೆಳೆಸುವ
ಶಾಂತಿ ಬೆಳೆಸುವ ||

—ಸಿ. ಆರ್. ರಾಜಶೇಖರಯ್ಯ

# ಅಲ್ಲಮ

—ಎಂ. ಎಸ್. ನ್ಯಾಸರಾವ್

 

ಬೆನ್ನಿಗೆ ಮದ್ದಳೆ ಬಿಗಿದು
ಮನೆ, ಮಠ, ಊರು, ಕೇರಿ ಬಿಟ್ಟು
ಬಿರು ಬಿಸಿಲಲ್ಲಿ ಹುಡುಕುತ್ತ ಹೊರಟೆ ಆ–ಅವನ

ಕೇಳಿದ್ದಕ್ಕೆ ಕೆಲವರು ಅರಿಯೆನೆಂದರು
ಉಳಿದವರು "ಕಂಡಿಲ್ಲ ಈ ದಿಕ್ಕಿನಲ್ಲೇ
ನಡೆದರೆ ಕಾಣಬಹುದು'' ಎಂದರು.
ಹಲವರು ಹಾಗಿದ್ದ, ಹೀಗಿದ್ದ ಎಂದು
ಹಗ್ಗ ಹೊಸೆದು ಮರೆಯಾದರು

ಅಳಿದೆ ಕಣ್ಣಳತೆಯಲ್ಲೇ ಮುಗಿಲುದ್ದದವನ
ಎದೆಗುಹೆಯಲ್ಲಿ ಬೆದಕಿ ತಡಕಾಡಿ ಹುಡುಕುತ್ತ ನಡೆದೆ

ಗುಡ್ಡ, ಬೆಟ್ಟ, ಕಾಡು, ಕತ್ತಲೆ
ದಟ್ಟಮರಗಳ ಚೀರಿಡುವ ಹುಳಹುಪ್ಪಟೆ
ಮೌನ ದಬ್ಬುವ ಸೀಳು ಕ್ರೂರ ಸದ್ದುಗಳಲ್ಲಿ ಇಣುಕಿ
ಬೀದಿ ಗದ್ದಲದಲ್ಲಿ ಅರಸುತ್ತ
ದಾಸೋಹ ಮಠದಲ್ಲಿ, ಉಣುವ ಜಂಗಮರಲ್ಲಿ
ಸಿಕ್ಕಿದೆಡೆಯಲ್ಲಿ, ಕಂಡಂತೆ
ಕಂಡಹಾಗೆ ಥಟ್ಟನೆ ಇಲ್ಲವಾದಂತೆ, ಕಸಿವಿಸಿಗೆ ಸಿಕ್ಕು
ಅಲ್ಲಲ್ಲಿ ಅಲೆದೆ. ಎಲ್ಲೆಂದರಲ್ಲಿ ನಿಂತೆ.
ದೇಹದುದ್ದಕ್ಕೂ ಅವನ ಚಿಂತೆ.

ಕರುವಾದೆ
ಅರಸಿ ನಡೆದಂತೆ ತಾಯಬಳಿಗೆ
ಕರೆದಿತ್ತು ಪ್ರಶಾಂತ ಗುಂಗುನಾದ
ನೂರು ವೀಣೆ ಮಿಡಿದ ತವಕ

ದೇಗುಲದ ಉದ್ದಗಲ ಗೆಜ್ಜೆ ಗೊಂಚಲ ನಡುವೆ
ಮಧುಕೇಶ್ವರನ ಕಂಡೆ
ಹೆಪ್ಪುಗಟ್ಟಿದ ನಿಟ್ಟುಸಿರು ಹಗುರಾಗಿ ಮುಗಿಲಾಯ್ತು
ಒಳಗೊಳಗೆ ನವಿರೆದ್ದು ಗೆಜ್ಜೆಹೆಜ್ಜೆಗೆ ಕುಣಿದೆ
ಕುಪ್ಪಳಿಸಿ ಮದ್ದಳೆ ಬಾರಿಸುತ್ತ ಮೈ ಮರೆತೆ.

ಸುತ್ತ ಬಿಗಿವ ಜಾಲದಲ್ಲಿ ಮುಗುಳು ನಕ್ಕ ಮಾಯೆ
ಕಂಗಳ ಉರಿಗೆ ಚಣ ಕರ್ಪೂರವಾದೆ
ಅರಿವು ಕಲಿಸಿತ್ತಯ್ಯ ನನಗೆ ಪಾಠ.

ಅಲ್ಲೇ ಕಿತ್ತೆಸೆದು ಬಟ್ಟೆಬರೆ,
ಕುಟ್ಟಿ ಪುಡಿಮಾಡಿ ಮದ್ದಳೆ,
ಈ ಎಲ್ಲದರ ನಡುವೆ ಇಲ್ಲವಾಗಿ
ಹೊಕ್ಕೆ ಕಾಡಿನೊಳಗೆ.

ಅರೆ, ಏನೀ ಸಂಗಮ ?
ಗವಿ ಎದುರು ನಿಂತೆ ಅನಿಮಿಷ
ಕಂಡ ನನಗಲ್ಲಿ ಆ ದಿವ್ಯ ಪುರುಷ !

ಸಣ್ಣ ಕಥೆ

# ಬೆಳಕಿನೆಡೆಗೆ

—ದಿಗಂಬರ ಜೋಶಿ.

ಮಳೆಗಾಲದ ಜಡಿಮಳೆ ಒಂದೇ ಸಮನೆ ಸುರಿಯುತ್ತಿದೆ. ಆಗಸವನ್ನು ಆವರಿಸಿದ ಕಾರ್ಮೋಡಗಳು ಅಮಾವಾಸ್ಯೆಯ ರಾತ್ರಿಯನ್ನು ವಿರಿಸುವಂತೆ ಕತ್ತಲೆಯನ್ನು ಹರಡಿವೆ. ಇಂತಹ ಕಾರ್ಗತ್ತಲೆಯನ್ನು ಗಮನಿಸದೆ ದೃಢಕಾಯದ ತರುಣನೊಬ್ಬ ವೇಗವಾಗಿ ಹೆಜ್ಜೆ ಹಾಕುತ್ತಿದ್ದಾನೆ. ಬಾಹ್ಯಜಗತ್ತಿನ ಪರಿವೆಯೇ ಆತನಿಗೆ ಇದ್ದಂತಿಲ್ಲ. ಅವನ ತಲೆಯಲ್ಲಿರುವುದು ಒಂದೇ ವಿಚಾರ; ಬೇಗ ತನ್ನ ಗುರಿಯನ್ನು ಸೇರಬೇಕು. ಯುವಕನ ವಿಚಾರ ಸರಣಿಗೆ ಬ್ರೇಕ್ ಹಾಕಿದಂತಾಗಿ ಗಕ್ಕನೆ ನಿಂತು ಬಿಟ್ಟನು. ಎದುರಿನಲ್ಲಿ ಗಂಗಾಮಾಯಿ ಮಹಾಪೂರದಿಂದ ತುಂಬಿ ಪ್ರವಹಿಸುತ್ತಿದ್ದಳು. ನದಿಯನ್ನು ಹೇಗಾದರೂ ಮಾಡಿ ದಾಟಲೇಬೇಕು. ಯುವಕನು ಒಂದು ಕ್ಷಣ ವಿಚಾರಮಾಡಿ ಹೆಜ್ಜೆಯನ್ನು ಮುಂದಿಟ್ಟ. ಇನ್ನೇನು ನದಿಯಲ್ಲಿ ಹಾರಿಬಿಡುವನು! ಅಷ್ಟರಲ್ಲಿ ಒಂದು ಹೆಣ ತೇಲುತ್ತಾ ಬರುವುದು ಕಾಣಿಸಿತು. ಅದನ್ನೇ ತೆಪ್ಪದಂತೆ ಉಪಯೋಗಿಸಿ ಆಚೆ ದಡವನ್ನು ಸೇರಿದ.

ಆದರೆ.... ಯಾರಿತ....?–ಹೊರಟದ್ದಾದರೂ ಎಲ್ಲಿಗೆ ?

★ ★ ★ ★

ಇಪ್ಪತ್ತರ ಯುವಕ ತುಲಸಿಗೆ ಅವನ ತಂದೆ ತಾಯಿಗಳು ಮದುವೆ ಮಾಡಿದರು. ತರುವಾಯ ತುಲಸಿ ಹೆಂಡತಿಯಲ್ಲಿಯೇ ಅನುರಕ್ತನಾದ; ಬಾಹ್ಯ ವ್ಯವಹಾರವನ್ನೂ ಮರೆತ. ಹೆಂಡತಿಯನ್ನು ಒಂದರೆ ಕ್ಷಣವೂ ಬಿಟ್ಟಿರಲಾರದಾದ ಅವನ ಈ ಅನುರಕ್ತಿ ಹೆಂಡತಿಗೂ ಹಿಂಸೆಯಾಗಿ ಪರಿಣಮಿಸಿತು. ಮದುವೆಯಾಗಿ ಅನೇಕ ವರ್ಷಗಳಾದರೂ ತೌರುಮನೆಯ ಮುಖವನ್ನೇ ಕಾಣದಂತಾದಳು. ಗಂಡನನ್ನು ಕಾಡಿದಳು ಬೇಡಿದಳು. ಎಲ್ಲ ವ್ಯರ್ಥವಾಯಿತು. 'ಒಂದು ದಿನದ ಮಟ್ಟಿಗಾದರೂ ನನ್ನನ್ನು ಬಿಡಿರಿ ತಂದೆ ತಾಯಿಗಳ ಮುಖ ನೋಡಿ ಬರುತ್ತೇನೆ' ಎಂದು ಅಂಗಲಾಚಿದಳು: ತುಲಸಿಯ ಹೃದಯ ಕರಗಲಿಲ್ಲ. 'ದೇವರೆ ನನ್ನ ಗಂಡನಿಗಿಷ್ಟು ಕರುಣೆಯನ್ನು ದಯಪಾಲಿಸು' ಎಂದು ಮೊರೆ ಇಡುವುದೆ ಅವಳ ಗತಿಯಾಯಿತು. ತಂದೆ ತಾಯಿಗಳೂ ಮಗನಿಗೆ ಬುದ್ಧಿವಾದ ಹೇಳಿದರು. ತುಲಸಿ ಯಾವುದಕ್ಕೂ ಜಪ್ಪೆನ್ನಲಿಲ್ಲ. ತಂದೆ ತಾಯಿಗಳ ಒತ್ತಾಯ ಹೆಚ್ಚಾದಾಗ, 'ನೀವು ಹೀಗೆ ಒತ್ತಾಯಿಸಿದರೆ ನಿಮ್ಮನ್ನೂ ಬಿಟ್ಟು ಬೇರೆ ಇರಬೇಕಾಗುತ್ತದೆ' ಎಂದು ಹೆದರಿಸಿದ. ತಂದೆ ತಾಯಿಗಳು ಸುಮ್ಮನಾಗಬೇಕಾಯಿತು. 'ದೇವರೆ ನಮ್ಮ ಮಗನಿಗಿಷ್ಟು ಕರುಣೆಯನ್ನು ದಯಪಾಲಿಸು, ಎಂದು ಮೊರೆಯಿಡುವುದೆ ಅವರ ಗತಿಯೂ ಆಯಿತು. ಕೊನೆಗೊಮ್ಮೆ ದೇವರಿಗೂ ಕರುಣೆ ಬಂದಿತು.

ಒಂದು ದಿನ ಬಾದಶಹನು ತುಲಸಿಯನ್ನು ಕರೆದು 'ನಾನು ಎರಡು ದಿನಗಳ ಪ್ರವಾಸ ಇಟ್ಟುಕೊಂಡಿದ್ದೇನೆ. ನೀನು ನನ್ನ ಜತೆಯಲ್ಲಿರಬೇಕು.'

ಎಂದು ಆಜ್ಞಾಪಿಸಿದ. ತುಲಸಿಗೆ ಸಂಕಟಕ್ಕಿಟ್ಟುಕೊಂಡಿತು. ಇತ್ತ ಹೆಂಡತಿಯನ್ನೂ ಬಿಟ್ಟಿರಲಾರ; ಅತ್ತ ಬಾದಶಹನ ಆಜ್ಞೆಯನ್ನು ಮೀರಲಾರ, ತನ್ನ ದೈವವೇ ಕೆಟ್ಟುದೆಂದು ಹಳಿದುಕೊಂಡ; ದೇವರಲ್ಲಿ ಮೊರೆಯಿಟ್ಟ. ಏನೂ ಪ್ರಯೋಜನವಾಗಲಿಲ್ಲ. ಮನಸ್ಸಿಲ್ಲದ ಮನಸ್ಸಿನಿಂದ ಬಾದಶಹನ ಜೊತೆಗೆ ಪ್ರಯಾಣ ಬೆಳೆಸಿದ.

ಇತ್ತ ಅವನ ತಂದೆ ತಾಯಿಗಳು ಸೊಸೆಯನ್ನು ಕರೆದು, 'ನಿನ್ನ ಗಂಡನಂತೂ ನಿನ್ನನ್ನು ತೌರುಮನೆಗೆ ಕಳುಹಿಸುವುದಿಲ್ಲ. ಈಗ ಹೇಗೂ ಆತ ಊರಲಿಲ್ಲ. ನೀನಾದರೂ ತೌರುಮನೆಗೆ ಹೋಗಿ ಎರಡು ದಿನ ಇದ್ದು ಬಾ' ಎಂದು ಕಳುಹಿಸಿದರು. ತುಲಸಿ ಎರಡು ದಿನಗಳನ್ನು ಹೇಗೋ ಕಳೆದು, ಎರಡನೆಯ ದಿನದ ರಾತ್ರಿಯೇ ಮನೆಗೆ ಹಾಜರಾದ. ಹೆಂಡತಿಯನ್ನು ಕೂಗಿದ. ಅವಳ ದನಿ ಕೇಳಿಸಲಿಲ್ಲ ತಂದೆ ತಾಯಿಗಳೇ ಮಗನನ್ನು ಸ್ವಾಗತಿಸಿದರು 'ನನ್ನ ಹೆಂಡತಿ ಎಲ್ಲಿ?' ಗುಡುಗಿದ ತುಳಸಿ. 'ತೌರುಮನೆಗೆ ಹೋಗಿದ್ದಾಳೆ. ಈ ರಾತ್ರಿ ಕಳೆದೊಡನೆ ಬರುತ್ತಾಳೆ' ತಂದೆ ತಾಯಿಗಳು ಉತ್ತರಿಸಿದರು' ಎಷ್ಟು ಹೇಳಿದರೂ ಕೇಳದೆ ಆ ರಾತ್ರಿಯಲ್ಲಿ ಧೋ ಧೋ ಎಂದು ಸುರಿಯುತ್ತಿರುವ ಮಳೆಯನ್ನೂ ಲೆಕ್ಕಿಸದೆ ಮನೆಯಿಂದ ಹೊರಬಿದ್ದ; ಕತ್ತಲೆಯಲ್ಲಿ ಮರೆಯಾದ.

ತುಲಸಿ ಹೆಂಡತಿಯ ಮನೆಯನ್ನು ತಲುಪಿದಾಗ ರಾತ್ರಿಯ ಮುಕ್ಕಾಲು ಭಾಗ ಕಳೆದು ಹೋಗಿದ್ದರೂ ಸುತ್ತಲೂ ಗಾಢಾಂಧಕಾರ ಹಬ್ಬಿತ್ತು, ಜನ ನಿದ್ರೆಯಲ್ಲಿ ಮುಳುಗಿದ್ದರು ಹೆಂಡತಿ ಇರುವುದು ಮಹಡಿಯ ಮೇಲೆ. ಮೇಲಕ್ಕೆ ಹೋಗಲು ಉಪಾಯವೇನು? ತುಲಸಿ ಚಿಂತಿಸುತ್ತಾ ನಿಂತಾಗ ಮಿಂಚೊಂದು ಝಗ್ಗನೆ ಮಿನುಗಿ ಮಾಯವಾಯಿತು. ಅದರ ಬೆಳಕಿನಲ್ಲಿ ಮಹಡಿಯ ಕಿಟಕಿಯಿಂದ ಹಗ್ಗವೊಂದು ಇಳಿಬಿದ್ದಂತೆ ಕಂಡಿತು. ತುಲಸಿ ಅದನ್ನು ಹಿಡಿದುಕೊಂಡು ಸರಸರನೆ ಮಹಡಿಯನ್ನೇರಿದ. ಬಾಗಿಲನ್ನು ತಟ್ಟಿ ಸೌಮ್ಯವಾಗಿ ಹೆಂಡತಿಯನ್ನು ಕೂಗಿದ ಸವಿ ನಿದ್ದೆಯಲ್ಲಿದ್ದ ಅವಳಿಗೆ ಗಂಡನ ದನಿ ಕೇಳಿ ಆಶ್ಚರ್ಯವಾಯಿತು. ಕಣ್ಣುಜ್ಜಿಕೊಳ್ಳುತ್ತ ಬಾಗಿಲು ತೆರೆದಳು. ಎದುರಿಗೆ ತನ್ನ ಗಂಡ ನಿಂತಿದ್ದಾನೆ. ತೊಟ್ಟ ಬಟ್ಟೆಗಳೆಲ್ಲ ಒದ್ದೆಯಾಗಿ ನೀರು ತೊಟ್ಟಿಕ್ಕುತ್ತಿದೆ. ಈ ಅವಸ್ಥೆಯಲ್ಲಿ ಅವನನ್ನು ನೋಡಿ ಅವಳಿಗೆ ಕನಿಕರವುಂಟಾಯಿತು. ಮೊದಲು ಬಟ್ಟೆ ಬದಲಾಯಿಸಲು ಗಂಡನನ್ನು ಒತ್ತಾಯಿಸಿದಳು.

'ಇದೊಂದು ರಾತ್ರಿ ಕಳೆದಿದ್ದರೆ ನಾನೇ ಬರುತ್ತಿದ್ದೆ. ಇಂಥ ಮಳೆಯಲ್ಲಿ ಇಲ್ಲಿಗೆ ಬರುವ ಅವಸರವೇನಿತ್ತು?' ಗಂಡನನ್ನು ಕೇಳಿದಳು. 'ನಿನ್ನನ್ನು ಬಿಟ್ಟಿರಲಾರದೆ ಮಳೆಯನ್ನೂ ಲೆಕ್ಕಿಸದೆ ಓಡಿಬಂದೆ' ನುಡಿದ ತುಳಸಿ 'ಆದರೆ ಮಹಡಿಯ ಮೇಲೆ........!' ಆಶ್ಚರ್ಯದಿಂದ ನೋಡಿದಳು ಗಂಡನನ್ನು. 'ಬಾ ತೋರಿಸುತ್ತೇನೆ.' ಎಂದು ತುಳಸಿ ಹೆಂಡತಿಯೊಂದಿಗೆ ಹೊರಬಂದ. 'ಅದೋ ನೋಡು ಕಿಟಕಿಗೆ ಜೋತುಬಿದ್ದ ಹಗ್ಗವನ್ನು ಹಿಡಿದುಕೊಂಡು ಮೇಲೇರಿ ಬಂದೆ' ಎಂದ ತುಳಸಿ. ಮುಂದಕ್ಕೆ ದೀಪವನ್ನು ಚಾಚಿ ನೋಡಿದಳು ಅವಳ ಎದೆ ಧಸ್ಸೆಂದಿತು. ಮೈಯಲ್ಲಿ ನಡುಕವುಂಟಾಯಿತು. ಅದು ಹಗ್ಗವಾಗಿರದೆ ಹಾವಾಗಿತ್ತು! ದೇವರೇ ತನ್ನ ಗಂಡನನ್ನು ಕಾಪಾಡಿದನೆಂದು ಅವಳಿಗೆ ಅನ್ನಿಸಿತು ಆ ಭಾವನೆಯಲ್ಲಿಯೇ, "ನನ್ನ ಮೇಲಿಟ್ಟಿರುವ ಪ್ರೇಮವನ್ನು ಶ್ರೀರಾಮನ ಮೇಲಿಟ್ಟಿದ್ದರೇ.......!" ಎಂಬ ಉದ್ಗಾರ ಅವಳ ಬಾಯಿಯಿಂದ ಹೊರಬಿತ್ತು ಅವಳಿಗರಿವಿಲ್ಲದಂತೆ.

ಶ್ರೀರಾಮನ ಹೆಸರು ಕಿವಿಗೆ ಬೀಳುತ್ತಲೆ ತುಲಸಿಯ ಮೈಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಅವನ ಕಣ್ಣಮುಂದೆ ಬೆಳಕಿನ ಕಿರಣವೊಂದು ಹೊಳೆಯಿತು. ಅವನ ಮನಸ್ಸಿನ ವೃತ್ತಿ ಬದಲಾಯಿತು. ಎದುರಿನಲ್ಲಿ ನಿಂತ ಹೆಂಡತಿ ಗುರು ಸ್ವರೂಪಳಾಗಿ ಕಂಡಳು. 'ಬೆಳಕಿನ ದಾರಿ ತೋರಿದ ನಿನಗೆ ಧನ್ಯವಾದಗಳು.' ಎಂದು ತುಲಸಿ ಹೆಂಡತಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ ಅಲ್ಲಿ ಒಂದು ಕ್ಷಣವೂ ನಿಲ್ಲದೆ ಮಹಡಿಯಿಳಿದು ಕತ್ತಲೆಯಲ್ಲಿ ಮರೆಯಾದ. ಜಗತ್ತು ಕತ್ತಲೆಯಿಂದ ಆವರಿಸಿದ್ದರೂ ಬೆಳಕೊಂದು ಅವನಿಗೆ ದಾರಿ ತೋರುತ್ತಲಿತ್ತು. ಆ ಬೆಳಕಿನೆಡೆಗೆ ಆತ ಹೆಜ್ಜೆ ಹಾಕತೊಡಗಿದ.

—

## ಸಣ್ಣ ಕಥೆ

# ಶಿವ ಭಕ್ತ

—ಟಿ. ಸಿ. ಚಂಪಕ

ಒಂದು ಸಲ ಈಶ್ವರನು, ಪಾರ್ವತಿ ಯೊಡನೆ ಭೂಲೋಕದ ಸಂಚಾರಕ್ಕೆ ಬಂದನು. ಆಗ ಅವರು ಒಂದೂರಿನಲ್ಲಿದ್ದ ಗಣೇಶ ದೇವಸ್ಥಾನಕ್ಕೆ ಬಂದು ತಮ್ಮ ಮಗನ ಕ್ಷೇಮ ಸಮಾಚಾರವನ್ನು ವಿಚಾರಿಸುತ್ತಿದ್ದರು. ಆಗ ಪಾರ್ವತಿಗೆ ಆ ಊರಿನಲ್ಲಿದ್ದ ಶಿವಭಕ್ತನ ನೆನಪಾಯಿತು.

ಪಾರ್ವತಿ ಈಶ್ವರನನ್ನು ಕುರಿತು ಹೇಳಿದಳು. "ಸ್ವಾಮಿ, ನಿಮ್ಮ ಭಕ್ತನೊಬ್ಬ ಬಹಳ ಬಡತನದಲ್ಲಿದ್ದಾನೆ. ಅವನಿಗೇನಾದರೂ ಸಹಾಯ ಮಾಡಬಾರದೇಕೆ ?''

ಈಶ್ವರ ಗಣೇಶನ ಕಡೆಗೆ ತಿರುಗಿ "ಮಗನೇ, ಈ ನನ್ನ ಭಕ್ತನಿಗೆ ನಾಳೆ ಸಂಜೆಯೊಳಗೆ ಐದು ಸಹಸ್ರ ರೂಪಾಯಿಗಳನ್ನು ಕೊಡು'' ಎಂದನು. ಈ ಮಾತುಗಳನ್ನು ದೇವಸ್ಥಾನದ ಬಳಿ ಹೋಗುತ್ತಿದ್ದ ಒಬ್ಬ ಅಕ್ಕಸಾಲಿಗನು ಕೇಳಿಸಿಕೊಂಡನು. ಇದರಿಂದ ತಾನೂ ಏನಾದರೂ ಲಾಭ ಪಡೆಯಬೇಕೆಂದು ಯೋಚಿಸಿ ಶಿವಭಕ್ತನ ಮನೆಗೆ ಹೋಗಿ "ಅಯ್ಯಾ, ನಾಳೆ ನಿನಗೆ ಬರುವ ಹಣವನ್ನೆಲ್ಲಾ ನನಗೆ ಕೊಡುವುದಾದರೆ, ಇಂದು ನಿನಗೆ ನಾನು ಎರಡು ಸಾವಿರ ರೂಪಾಯಿಗಳನ್ನು ಕೊಡುತ್ತೇನೆ" ಎಂದನು. ಇಡೀ ದಿನ ಬೇಡಿದರೂ ಒಂದು ಹಿಡಿ ಅಕ್ಕಿ ಸಿಗದಷ್ಟು ಬಡವನಾದ ಶಿವಭಕ್ತ ಈ ಸಲಹೆಯಿಂದ ಸಂತೋಷಗೊಂಡು "ಆಗಲಿ" ಎಂದನು. ಅಕ್ಕಸಾಲಿಗ ಹಿಗ್ಗಿಹೋದ ತನ್ನ ಮನೆಗೆ ಹೋಗಿ ಎರಡು ಸಾವಿರ ರೂಪಾಯಿಗಳನ್ನು ತಂದು ಶಿವಭಕ್ತನಿಗೆ ಕೊಟ್ಟು, ಅಕ್ಕಸಾಲಿಗನು ಮರುದಿನ ಬೆಳಿಗ್ಗೆ ಎದ್ದವನೇ ಶಿವಭಕ್ತನ ಮನೆಯ ಮುಂದೆ ಬಂದು ಕುಳಿತನು. ಎಷ್ಟು ಹೊತ್ತು ಕಾದರೂ ಹಣದೊಂದಿಗೆ ಗಣೇಶ ಬರಲಿಲ್ಲ. ಸಂಜೆಯಾಗುವ ಹೊತ್ತಿಗೆ ಅಕ್ಕಸಾಲಿಗನು ಮೇಲೆದ್ದು ಗಣೇಶನ ದೇವಸ್ಥಾನಕ್ಕೆ ಹೋದನು. "ಎಲಾ ಗಣಪತಿಯೇ ಎಂಥಾ ಮೋಸ ಮಾಡಿದೆ ?" ಎಂದು ಸಿಟ್ಟಿನಿಂದ ಬಾಗಿಲನ್ನು ಒದ್ದನು. ಜೀರ್ಣವಾದ ಆ ಬಾಗಿಲು ಮುರಿದು ಬಿತ್ತು. ಸಂದಿಯಲ್ಲಿ ಅವನ ಕಾಲು ಸಿಕ್ಕಿ ರಕ್ತ ಒಸರಲಾರಂಬಿಸಿತು. ಎಷ್ಟು ಕಿತ್ತರೂ ಕಾಲು ಹೊರ ಬರಲಿಲ್ಲ. ಇತ್ತ ಈಶ್ವರನು ಗಣೇಶನ ಬಳಿಗೆ ಬಂದು ಮಗನೇ, ನನ್ನ ಭಕ್ತನಿಗೆ ಹಣ ಕೊಟ್ಟೆಯಾ ? ಎಂದು ಕೇಳಿದನು. ಆಗ ಗಣೇಶನು "ಹೌದಪ್ಪ, ಈಗ ಎರಡು ಸಾವಿರ ರೂಪಾಯಿಗಳನ್ನು ಕೊಡಿಸಿದ್ದೇನೆ. ಇನ್ನು ಮೂರು ಸಾವಿರ ರೂಪಾಯಿಗಳಿಗಾಗಿ ಅಕ್ಕಸಾಲಿಗನನ್ನು ಸೆರೆಯಲ್ಲಿರಿಸಿದ್ದೇನೆ. ಅವನು ಹಣ ಕೊಡದಿದ್ದರೆ ಅವನ ಗತಿ ನೆಟ್ಟಗಾಗುವುದಿಲ್ಲ." ಎಂದನು.

ಈ ಮಾತನ್ನು ಕೇಳಿದ ಅಕ್ಕಸಾಲಿಗನು "ಸ್ವಾಮಿ ಗಣಪತಿ ನನ್ನನ್ನು ಈ ಸೆರೆಯಿಂದ ಪಾರು ಮಾಡು. ಈಗಲೇ ಆ ಭಕ್ತನಿಗೆ ಮೂರು ಸಾವಿರ ರೂಪಾಯಿಗಳನ್ನು ತಂದು ಕೊಡುತ್ತೇನೆ." ಎಂದು ಬೇಡಿಕೊಂಡನು.

ಗಣೇಶನು ಅವನನ್ನು ಬಿಡುಗಡೆ ಮಾಡಿದನು. ಶಿವಭಕ್ತನಿಗೆ ಐದು ಸಾವಿರ ರೂಪಾಯಿಗಳು ಬಂದವು.

ಅನ್ಯರ ಹಣಕ್ಕಾಗಿ ಆಸೆಬಿದ್ದರೆ ಅಕ್ಕಸಾಗನಿಗೆ ಆದ ಗತಿಯೇ ಆಗುತ್ತದೆಯಲ್ಲವೇ ? —

ಜಾನಪದ ಜೇನು—೯

# "ಬಾರಮ್ಮ ಮಗಳ ಕೊಡುತೇನಿ"

—ಗೊ. ರು. ಚನ್ನಬಸಪ್ಪ

ನಮ್ಮ ಹಳ್ಳಿಯ ತಾಯಂದಿರು ಬಹಳ ದೂರ ದೃಷ್ಟಿಯುಳ್ಳವರು. ತಮ್ಮ ಕರುಳಿನ ಬಳ್ಳಿ ಎಂದೆಂದಿಗೂ ಬಾಡದೆ ನಿತ್ಯ ಹಸಿರಾಗಿರಬೇಕೆಂದು ಅವರ ಹಾರೈಕೆ. ಆ ಹಾರೈಕೆಯ ಒಂದು ನುಡಿಯನ್ನು ಕೇಳಿ.

ಮಗಳು ಹೆಣ್ಣಡೆಯಾಲಿ, ಸೊಸೆಯು
ಗಂಡ್ಹಡೆಯಾಲಿ
ಎಳೆಗರು ಎಮ್ಮೆ ಕರೆಯಾಲಿ । ನನ ಮನೆಯ
ಸಡಗರ ನೋಡೋಕೆ ಶಿವ ಬರಲಿ ॥

ಅಹುದು. ಮಗ ಮನೆಯ ತೊಲೆಗಂಭ. ಅದಕ್ಕೆ ಸೊಸೆಯ ಹೊಟ್ಟೆಯಲ್ಲಿ ಮಗ ಹುಟ್ಟಬೇಕು. ಬೇರೆಯವರ ಮನೆಗೆ ಕೊಟ್ಟ ಮಗಳು ಹೆಣ್ಣು ಹೆರಬೇಕು. ಆ ಮೊಮ್ಮಗಳನ್ನು ತನ್ನ ಮೊಮ್ಮಗನಿಗೆ ತಂದುಕೊಂಡು ತನ್ನ ಕರುಳಿನ ಬಳ್ಳಿ ಬಾಡದಂತೆ ನೋಡಿಕೊಳ್ಳಬೇಕು. ಇಂತಹ ಹಸಿರಿನ ಬದುಕಿನ ಸಡಗರ ನೋಡಲಿಕ್ಕೆ ಶಿವನೇ ಬರಬೇಕು !

ತಾಯಿಯ ಈ ಹಂಬಲ ಅನೇಕ ವೇಳೆ ತಿರುವು ಮುರುವೂ ಆಗಬಹುದು. ಅಂತೇ ಇವರ ಮಗಳಿಗೆ ಗಂಡು ಮಗ ಹುಟ್ಟಿದ್ದಾನೆ. ಆಕೆಯ ಅಣ್ಣನಿಗೆ ಹೆಣ್ಣು ಮಗುವಾಗಿದೆ. ಸುದ್ದಿ ಕೇಳಿದ ತಂಗಿಗೆ ಸಡಗರವೋ ಸಡಗರ. ಅಣ್ಣನ ಮಗಳು ಎಷ್ಟು ಬೇಗ ಮದುವೆಗೆ ಸಿದ್ಧಳಾಗುವಳೋ ಎಂಬ ಅವಸರ. ಆಸೆಗೆ ಹತ್ತು ರೆಕ್ಕೆಯಂತೆ ! ಅದರಿದರ ನೆಪ ಹಾಕಿ ತಿಂಗಳಿಗೊಮ್ಮೆ ತೌರಿಗೆ ಹೋಗಿ ತನ್ನ ಭಾವಿ ಸೊಸೆಯನ್ನು ನೋಡಿಕೊಂಡು ಬರುತ್ತಾಳೆ. ಇತ್ತ ಮದುವೆಯ ವಯಸ್ಸಿಗೆ ಬಂದಿರುವ ಮಗನನ್ನು ಕುರಿತು

ಚಂದಾರ ಗಿರಿಯಾಗೆ, ಮನೆ ನೋಡಿ ಬಂದೀನಿ
ಚಂದ್ರಾಮಗಿಂತ ಚೆಲುವೀಯ । ನೋಡೀನಿ
ಒಪ್ಪೇನೋ ಕಂದ ಮನಸೀಗೆ ?

ಎಂದು ಕೇಳುತ್ತಾಳೆ. ಚಿಗುರು ಮೀಸೆಯ ಹುಡುಗನಿಗೆ 'ಚಂದ್ರಮನಿಗಿಂತ ಚೆಲುವೆ' ಎಂಬ ನುಡಿ ಕೇಳಿ ಮೈ ಪುಲಕಿತವಾಗುತ್ತದೆ. ತಾನು ಆ ಹೆಣ್ಣನ್ನು ನೋಡಿರದಿದ್ದರೂ ತನ್ನ ತಾಯಿಯ ಮಾತಿನ ಬಗ್ಗೆ ವಿಶ್ವಾಸವಿದೆ. ತನಗೊಪ್ಪುವ ಹೆಣ್ಣನ್ನೇ ತಾಯಿ ಆರಿಸಿರುತ್ತಾಳೆಂಬ ನಂಬುಗೆಯಿದೆ. ಅಂತೇ ತಾಯಿಗೆ 'ನೀನೊಪ್ಪಿದ ಮೇಲಿನ್ನೇನು ?' ಎನ್ನುತ್ತಾನೆ. ಮಗ ಸಂತೋಷವಾಗಿ ಮದುವೆಗೆ ಒಪ್ಪಿದರೆ ಸಾಕು 'ಹಿಗ್ಗಿ ಹೀರೇಕಾಯಿ' ಆಗುವ ತಾಯಂದಿರಿಗೆ ಇನ್ನು ತಾವು ಒಪ್ಪಿದ ಹೆಣ್ಣನ್ನೇ ಮಗ ಒಪ್ಪಿದನೆಂದರಂತೂ ಅವರ ಸಂತೋಷಕ್ಕೆ ಪಾರವೇ ಇರುವುದಿಲ್ಲ.

ತಾಯಿ ತಡಮಾಡಲಿಲ್ಲ. ಹತ್ತಿರದ ಊರಿಗೆ ಸಂತೆಗೆ ಬಂದಿದ್ದ ಅಣ್ಣನನ್ನು ಭೇಟಿಮಾಡಿ—

ಸೋಮವಾರದ ಪೇಟಿ ಗ್ರಾಮದೇರಿಯಮ್ಯಾಲೆ
ಹೋಗುವ ಅಣ್ಣಯ್ನ ಸೆರಗ್ಹಿಡಿದು । ಕೇಳ್ಯಾಳ
ಹೆಣ್ಣೀಗೆ ಬರುತೀನಿ ಮಗನೀಗೆ ॥

ಎಂದು ಪೂರ್ವಭಾವಿ ಸೂಚನೆ ಕೊಡುತ್ತಾಳೆ.

ಅಲ್ಲದೆ, ತಾನು ಹೆಣ್ಣಿಗೆ ಬಂದಾಗ ಅಣ್ಣ ಬೇರೆಲ್ಲೂ ಹೋಗದೆ ಮನೆಯಲ್ಲೇ ಇರಬೇಕೆಂದು ತಿಳಿಸುತ್ತಾಳೆ

ಮಾತೀಗೆ ಬರುತೀನಿ । ಮನೆಲಿರು ಅಣ್ಣಯ್ಯ
ಮಾತು ಹೊನ್ನುಕ್ಕೋರೊಡಗೂಡಿ। ಬರುತೀನಿ
ಕನ್ನೆಗೆ ಮಾತು ಕೊಡುವಂತೆ ॥

ಆಕೆ ಒಬ್ಬಳೇ ಬರುವುದಿಲ್ಲ. 'ಮಾತು ಹೊನ್ನುಕ್ಕೋರೊಡಗೂಡಿ' ಬರುತ್ತಾಳೆ. ಆಗ ಅಣ್ಣ ಮಾತು ಕೊಡಬೇಕು. ಆದರೆ ಅಣ್ಣ ಹೇಳುತ್ತಾನೆ—

ಮಾತು ಕೊಡಲೀಕೆ ನನ್ನಿಚ್ಛೆ ತಂಗ್ಯಮ್ಮ
ನಿಮ್ಮ ತಾಯ್ತಂದೇಯ ಬೆಸಗೊಳ್ಳಿ । ತಂಗ್ಯಮ್ಮ
ನಿಮ್ಮತ್ಗೆ ಚೆನ್ನೀಯ ಬೆಸಗೊಳ್ಳಿ ॥

ಅಣ್ಣನ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು 'ಹಾಗೇ ಆಗಲಿ' ಎನ್ನುತ್ತಾಳೆ ತಂಗಿ. ಕೆಲವು ದಿನ ಕಳೆದು ಒಳ್ಳೆಯ ದಿನ ನೋಡಿಕೊಂಡು ತಂಗಿ ಅಣ್ಣನ ಮನೆಗೆ ಬಂದಿದ್ದಾಳೆ. ನಾದಿನಿ ಬಂದ ಕಾರಣ ಅತ್ತಿಗೆಗೆ ತಿಳಿಯಲು ತಡವಾಗಲಿಲ್ಲ. ಆಕೆ ಬಲು ಜಾಣೆ ಸುಲಭವಾಗಿ ಜಾರಿಕೊಳ್ಳಲು ಹವಣಿಸುತ್ತಾಳೆ.—

ಹೆಣ್ಣು ಕೊಡುವೋಕೆ ನನ್ನಿಚ್ಛೆ ನಾದೀನಿ
ಚಿನ್ನದ ಹೊದ್ಕೆ ಕೊಡೆಯನ್ನು । ಹಿಡಿಯೋರ
ಅಣ್ಣ ಚೆನ್ನಿಗರ ಬೆಸಗೊಳ್ಳಿ ॥

ಎಂದು ತನ್ನ ಗಂಡನಿಗೆ ಕಣ್ಣಿನಲ್ಲೇ ಸನ್ನೆ ಮಾಡುತ್ತಾಳೆ. ಮೀನಿನ ಚಲನೆ ಮೀನಿಗಲ್ಲದೆ ಮತ್ತಾರಿಗೆ ತಿಳಿದೀತು ? ಅತ್ತಿಗೆಯ ಕಣ್ಸನ್ನೆಯನ್ನು ನಾದಿನಿ ಗಮನಿಸದೆ ಇರಲಿಲ್ಲ.

ಕಣ್ಣೀಗೆ ಮೂಗೀಗೆ ಎರಡೇನ ಅತ್ತೀಗೆ ?
ನಾ ನನ್ನ ಅಣ್ಣನಿಗೆ ಬೇರೇನ ? ಅತ್ತೀಗೆ
ನೀ ನಿನ್ನ ಮಗಳ ಕೊಡಬೇಕು ॥

ತಂಗಿ ಈ ಮಾತು ಕೇಳುತ್ತಿದ್ದಂತೆ, ಅಣ್ಣ ಬೇರೇನೋ ಕೆಲಸದ ನೆಪ ಹೇಳಿ 'ಮತ್ತೆ ನಾಳೆ ಮಾತನಾಡಿದರಾಯಿತು' ಎಂದು ಅಲ್ಲಿಂದ ಹೊರಡುತ್ತಾನೆ. ಆದರೆ ತಂಗಿ ಅಷ್ಟಕ್ಕೇ ಬಿಡಲಿಲ್ಲ. ಇಂತಹ ಮಾತುಗಳು ಹಿಡಿದಾಗಲೇ ಇತ್ಯರ್ಥವಾಗಬೇಕೆಂಬ ವ್ಯವಹಾರಜ್ಞಾನ್ಮ ಆಕೆಗೆ ಗೊತ್ತು. ಅಂತೇ ಹೊರಗೆ ಹೊರಟ ಅಣ್ಣನನ್ನು ಹಿಂಬಾಲಿಸಿ—

ಬೀದೀಲಿ ಹೋಗೋನೆ ಜಿಂಕದ ನಡೆಯವನೆ
ಚಿನ್ನದ ಹೊದ್ಕೆ ಕೊಡೆಯೋನೆ । ಅಣ್ಣಯ್ಯಾ
ಹೆಣ್ಣೀಗೆ ಬಂದೀನಿ ಕೊಡು ದೊರೆಯ ॥

ಎಂದು ಕೇಳುತ್ತಾಳೆ. ಆಗ ಅಣ್ಣ—

ಹಾಲು ಬಾನುಣ್ಣೋಳು, ಹವಳ ಕೇರಾಡೋಳು
ಆಚೆ ಕೇರ್ಯಾಗ ಪಗಡೀಯ । ಆಡುವ ಮಗಳ
ದೂರದ ಸೀಮೆಗೆ ಕೊಡಲಾರೆ ॥

ಎಂದಾಗ,

ಹಾಲು ಬಾನುಣ್ಣಾಲಿ। ಹವಳ ಕೇರಾಡಾಲಿ
ಆಚೆ ಕೇರೀಲಿ ಪಗಡೀಯ । ಆಡಾಲಿ
ನಿನ ಮಗಳ ನನಗೆ ಕೊಡಬೇಕು ॥

ಅಣ್ಣ ಏನೇನೋ ನೆಪ ಒಡ್ಡುತ್ತಿದ್ದುದನ್ನು ಕಂಡು ಬಹುಶಃ ತನ್ನ ಬಡತನ ಕಂಡು ಹೀಗೆ ಹಿಂಜರಿಯುತ್ತಿರಬಹುದೆಂದು ಭಾವಿಸಿ

ಆನೆ ವ್ಯಾಗಿಂದ್ಹಣವ, ದಾನ ಮಾಡುತ ಬರುವೆ
ರಾಯ ನಿನ್ಮಗಳ ತರಬಲ್ಲೆ । ಅಣ್ಣಯ್ಯ
ನ್ಯಾಯಾದಿ ಮಗಳ ಕೊಡು ದೊರೆಯೆ ॥

ಎನ್ನುತ್ತಾಳೆ. ತಂಗಿಯ ಈ ಕೆಚ್ಚನ್ನು ಕಂಡು ಅಣ್ಣನಿಗೆ ಅಚ್ಚರಿಯಾಗುತ್ತದೆ. "ಈಕೆ ಬಿಡುವವಳಲ್ಲ ಏನು ಮಾಡುವುದು ? ಹೆಂಡತಿಗೆ ತನ್ನ ತೌರ ಕಡೆಗೆ ಕೊಡಬೇಕೆಂಬಾಸೆ'-ಎಂದು ಯೋಚಿಸಿ, ಹೇಗಾದರೂ ಮಾಡಿ ತಂಗಿಯಿಂದ ತಪ್ಪಿಸಿಕೊಳ್ಳಬೇಕೆಂದು ಅಣ್ಣ ಮತ್ತೊಂದು ನೆಪ ಹೇಳುತ್ತಾನೆ—

ಹೆಣ್ಗೆ ಬರುವೂ ತಂಗೀ ಮೊನ್ನೆ ಬರಬೇಕಿತ್ತು
ಹೊನ್ನೂರ ಸೀಮೆ ದೊರೆ ಬಂದು। ಮಗಳೀಗೆ
ಹೊನ್ನ ಕಂಕಣವ ತೊಡಿಸ್ಹೋದ ॥

[ 25 ನೇ ಪುಟನೋಡಿ]

# ಭುವಿಗಿಳಿದ ಶಿವ ತಾನು ಇವರಿಗೊಲಿದು

ಗುಲ್ಬರ್ಗ ಜಿಲ್ಲೆಯಲ್ಲಿ ಆಲಂದೆ ತೀರ್ಥ ಎಂಬ ಊರು ಶ್ರೀ ಸೋಮನಾಥ ದೇವನ ಇರವಿನಿಂದ ಯಾತ್ರಸ್ಥಳವಾಗಿ ಮೆರೆಯುತ್ತಿತ್ತು. ಆ ಊರಿನಲ್ಲಿ ಪುರುಷೋತ್ತಮ ಭಟ್ಟ, ಸೀತಾದೇವಿ ಎಂಬ ದಂಪತಿಗಳು ಸೋಮನಾಥದೇವರ ಪರಮ ಭಕ್ತರಾಗಿದ್ದರು.

ಸೋಮನಾಥನನ್ನು ನಾನಾ ಸೇವೆಗಳಿಂದ ಮೆಚ್ಚಿಸಿ ಆತನ ವರಪ್ರಸಾದದಿಂದ ಕುವರನೊಬ್ಬನನ್ನು ಪಡೆದರು. ಆ ಮಗುವಿಗೆ ರಾಮ ಎಂದು ಹೆಸರಿಟ್ಟರು. ಆ ಮಗುವಿಗೆ ಚಿಕ್ಕಂದಿನಿಂದಲೂ ಶಿವನಾಮವೇ ತೊದಲ್ನುಡಿ ಮೊದಲ್ನುಡಿಯಾಗಿತ್ತು. ಕೊರಳಿಗೆ ಕಟ್ಟಿದ ಲಿಂಗವೇ ಆಟಿಕೆಯಾಗಿತ್ತು.

ಪರಮ ಶಿವಭಕ್ತನಾಗಿ ಬೆಳೆದ ಈ ಹುಡುಗ ದೊಡ್ಡವನಾದಮೇಲೂ ಸಹ ಯಾರ ಸಂಗಡವೂ ಸೇರದೆ ಸಾಂಸಾರಿಕ ಝುಳಕ್ಕೂ ಸಿಕ್ಕದೆ ಏಕಾಂತವಾಗಿ ಕುಳಿತು ಶಿವನಾಮ ಸ್ಮರಣೆಯಲ್ಲೇ ಕಾಲ ಕಳೆಯುತ್ತಿದ್ದನು. ಒಮ್ಮೆ ಅವನಿಗೆ ಶಿವಶರಣರ ಸ್ಥಾನಗಳನ್ನು ನೋಡಬೇಕೆಂದು ಆಸೆಯಾಯಿತು. ಅದಕ್ಕಾಗಿ ತೀರ್ಥಯಾತ್ರೆ ಹೊರಟ. ಮೊದಲು ಕಲ್ಯಾಣಕ್ಕೆ ಬಂದು ಅದಕ್ಕೆ ಸಮೀಪವಿರುವ ಶಿವಪುರಕ್ಕೆ ಬಂದು ಅಲ್ಲಿ ಕೆಲವು ದಿನ ಶಿವಾನುಭವಗೋಷ್ಠಿಯಲ್ಲಿದ್ದು ಪುನೀತನಾಗಿ ಅಲ್ಲಿಂದ ಲಕ್ಷ್ಮೇಪುರಕ್ಕೆ ಬಂದನು. ಅಲ್ಲಿ ಸೋಮಯ್ಯನಿಂದ ಸ್ಥಾಪಿತವಾಗಿದ್ದ ಸೋಮನಾಥೇಶ್ವರ ಲಿಂಗಕ್ಕೆರಗಿ ಅಲ್ಲಿಂದ ಮುಂದೆ ಬಳ್ಳಿಗಾವಿ, ರೇವಣಸಿದ್ಧಗಿರಿ, ಮುತ್ತಿಗಿ ಹಿರೆಜಂಬೂರುಗಳಲ್ಲಿದ್ದ ಶಿವಾಲಯಗಳಲ್ಲಿ ದೇವರ ದರ್ಶನ ಪಡೆದನು.

—ಹೆಚ್. ಜಿ. ರಾಧಾದೇವಿ

ಅಲ್ಲಿಂದ ಮುಂದೆ ಬನವಾಸಿಯ ಪೂರ್ವಕ್ಕೆ 24 ಮೈಲಿ ದೂರದಲ್ಲಿರುವ ಅಬ್ಬಲೂರಿಗೆ ಬಂದನು ಆ ಊರಿನಲ್ಲಿ ಒಳ್ಳೆಯ ರಾಜ ರಸ್ತೆಗಳೂ, ಉದ್ಯಾನವನಗಳೂ, ತಿಳಿನೀರಿನ ಕೊಳಗಳೂ ಇದ್ದವು. ಅವನು ಆ ಊರಿನಲ್ಲಿ ಒಂದು ಶಿವಾಲಯ ಕಾಣುವುದೇನೋ ಎಂದು ಹುಡುಕಿದ್ದೇ ಹುಡುಕಿದ್ದು. ಎಲ್ಲಿ ನೋಡಿದರು ಜೈನರ ಬಸದಿಗಳೇ! ಬರೀ ಜಿನಾಲಯಗಳೇ ರಾಮಯ್ಯನಿಗೆ ಕಾಣಿಸಿದವು

ಆದರೆ ಪ್ರತಿದಿನ ಶಿವಾಲಯದಲ್ಲಿ ಬಂದು ಶಿವದರ್ಶನ ಹಾಗೂ ಶಿವಪೂಜೆ ಮಾಡದೆ ರಾಮಯ್ಯ ಬಾಯಿಗೆ ತೊಟ್ಟು ನೀರು ಹಾಕುವವನಲ್ಲ. ಊರೆಲ್ಲಾ ಹುಡುಕಿದ ಮೇಲೆ ಊರ ಹೊರಗೆ ಬ್ರಹ್ಮೇಶ್ವರ ದೇವಾಲಯವೆಂಬ ಪಾಳುಬಿದ್ದ ಶಿವಾಲಯ ಕಾಣಿಸಿತು. ಅವನು ದೇವಾಲಯದ ಒಳಕ್ಕೆ ಹೋಗಿ ನೋಡಿದ. ಪೂಜೆ ಇಲ್ಲದೆ, ಅಭಿಷೇಕವಿಲ್ಲದೆ, ಧೂಳು ತುಂಬಿದ್ದ ಶಿವಲಿಂಗವನ್ನು ಕಂಡ. 'ತಂದೆ ನನ್ನ ಬರವಿಗಾಗಿ ಕಾದು ಕುಳಿತಿದ್ದೆಯಾ ? ಎಂದು ಕಂಬನಿದುಂಬಿ ತನ್ನ ಮೈಮೇಲಿನ ಶಲ್ಯವನ್ನೇ ಬಿಚ್ಚಿ ಶಿವಲಿಂಗವನ್ನು ಒರೆಸಿದ. ಶಿವಾಲಯವನ್ನು ಗುಡಿಸಿದ. ಸಮೀಪದ ಹಳ್ಳದಿಂದ ಹರಿಯುವ ನೀರು ತಂದು ಶಾಸ್ತ್ರೋಕ್ತವಾಗಿ ಅಭಿಷೇಕ ಮಾಡಿದ. ಮಲ್ಲಿಗೆ, ಕೇತಕಿ, ಬಿಲ್ವದಳ ತಂದು ಪೂಜಿಸಿದ. ಬ್ರಹ್ಮೇಶ್ವರಾ ಎಂದು ಹಾಡುತ್ತಾ ಶಿವಲಿಂಗವನ್ನಪ್ಪಿ ಮೈಮರೆತ.

ಆ ರಾತ್ರಿ ಹಾಗೆಯೇ ಕಳೆದು ಪ್ರಾತಃಕಾಲ ರಾಮಯ್ಯ ಶಿವಪೂಜೆಗೆ ಹೂ ತರಲೆಂದು

ಗರ್ಭಗುಡಿಯಿಂದ ಹೊರಗೆ ಬಂದಾಗ ಅಲ್ಲೊಬ್ಬ ಶಿವಲಿಂಗಕ್ಕೆ ಕಲುಚಾಚಿ ಮಲಗಿದ್ದುದನ್ನು ಕಂಡ.

ಅವನನ್ನು ಕಂಡು ರಾಮಯ್ಯನಿಗೆ ದು:ಖ ಉಕ್ಕಿತು. ಅವನನ್ನು ಎಬ್ಬಿಸಿ ಶಿವಲಿಂಗಕ್ಕೆ ಕಾಲು ಚಾಚಿ ಮಲಗುವುದು ಸರಿಯೇ? ಎಂದು ಕೇಳಿದ ಆ ಜೈನ ಕಣ್ಣುಜ್ಜಿಕೊಳ್ಳುತ್ತಾ ಇವನೆಡೆ ಪ್ರಶ್ನಾರ್ಥಕವಾಗಿ ನೋಡಿದ.

"ದೇವರ ಕಡೆ ಕಾಲು ಚಾಚಿ ಮಲಗಿದ್ದು ಸರಿಯೇ?" ಎಂದು ರಾಮಯ್ಯ ಪುನ: ಪ್ರಶ್ನಿಸಿದಾಗ ಆ ಜೈನ ಗಹಗಹಿಸಿ ನಕ್ಕು– "ಇವನು ದೇವರೇ ಯಾವ ದೇವರಿವನು? ನಮ್ಮ ಜಿನ ಗುರುವಿನಂತೆ ಭಕ್ತರ ಯಾವ ಯಾವ ತಂಡ ಸಲಹಿದ್ದಾನೆ?" ಎಂದ. ರಾಮಯ್ಯನ ಕಂಠ ಉಬ್ಬಿ ಬಂತು.

"ತ್ರಿಪುರಗಳನ್ನು ಸುಟ್ಟು ಅಸುರನನ್ನು ಸಂಹರಿಸಿ ದೇವತೆಗಳನ್ನು ಸಲಹಿದವನು, ಅಮೃತ ಮಂಥನ ಕಾಲದಲ್ಲಿ ಹುಟ್ಟಿದ ಘೋರ ವಿಷವುಂಡು ಇಡೀ ಬ್ರಹ್ಮಾಂಡವನ್ನೇ ಕಾಯ್ದವನು, ಬಾಣನಿಗೆ ಮಯೂರನಿಗೆ, ಕಾಳಿದಾಸನಿಗೆ, ಓಹಿಲನಿಗೆ, ಸಂಬಿಯಣ್ಣನಿಗೆ, ಉದ್ಭಟನಿಗೆ ದಯೆತೋರಿದವನು. ಅರ್ಜುನನಿಗೆ ಪಾಶುಪತಾಸ್ತ್ರವಿತ್ತವನು, ಕೊಡಗೂಸಿತ್ತ ಹಾಲು ಕುಡಿದವನು, ಕಣ್ಣಪ್ಪನಿಂದ ನೈವೇದ್ಯ ಕೈಗೊಂಡವನು, ಭೋಳೆಯರರಸ, ಭಕ್ತವತ್ಸಲ, ಕೈಲಾಸಾಧಿಪತಿ ಇವನು ಪಾರ್ವತೀರಮಣ, ಪರಶಿವ ಎಂಬುದರಿಯೆಯಾ?" ಎಂದ.

ಜೈನ ವ್ಯಂಗ್ಯವಾಗಿ ನಕ್ಕು "ಪುರಾಣದ ಸರಕು, ಇತಿಹಾಸದ ಸರಕು ಬಹಳ ತೆಗೆದೆ ಭಕ್ತ" ಆದರೆ ಅದನ್ನು ನಾನು ನಂಬಲಾರೆ, ನನ್ನ ಕಣ್ಣೆದುರಿ ನಿನ್ನ ದೇವನ ಒಂದು ಭಕ್ತವಾತ್ಸಲ್ಯದ ಉದಾಹರಣೆ ತೋರು ನಂಬುವೆ" ಎಂದ. ರಾಮಯ್ಯನಿಗೆ ಕೆಚ್ಚು ಮೂಡಿತು, "ಅರಿತವರಿಗಾಗಿಯಲ್ಲ ಅವನ ಪವಾಡ ಅರಿಯದವರಿಗಾಗಿ ಅವನ ಮಹಿಮೆ; ಭವಿಗಳ ಹೃದಯದಲ್ಲಿ ಬಿತ್ತಲಿಕ್ಕಾಗಿ ಮಾತ್ರ ಪವಾಡ, ಅವನ ಭಕ್ತವಾತ್ಸಲ್ಯ ಸತ್ಯವಾಗಿದ್ದರೆ ತರಿದಿಟ್ಟ ಶಿರವನ್ನು ಕೂಡಿಸಲಿ" ಎಂದವನೇ ಶಿವನನ್ನು ಸ್ತುತಿಸುತ್ತಾ ತನ್ನ ತಲೆಯನ್ನು ಶಿವಲಿಂಗದೆದುರು ಕತ್ತಿಯಿಂದ ಕತ್ತರಿಸಿಕೊಂಡನು. ಜೈನ ಬೆರಗಾದ! ಕಣ್ಣೀರಿಟ್ಟ, ಆದರೆ ಕತ್ತರಿಸಿದ ರಾಮಯ್ಯನ ರುಂಡವು ಮಾತನಾಡಿತು, "ಎಲೌ ಭಕ್ತ, ಕಣ್ಣೀರೇಕೆ? ಹೊನ್ನ ಹರಿವಾಣದಲಿಟ್ಟು ಏಳುದಿನ ಈ ಶಿರವನ್ನು ವಿವಿಧ ಶಿವ ಸಾನಿಧ್ಯ ಕ್ಷೇತ್ರಗಳಲ್ಲಿ ಇರಿಸಿ ಎಂಟನೇ ದಿನ ಮುಂಡಕ್ಕೆ ರುಂಡವನ್ನು ಕೂಡಿಸು" ಎಂದು ಅಪ್ಪಣೆ ಮಾಡಿತು. ಜೈನನು ಹೋಗಿ ಊರವರನ್ನೆಲ್ಲ ಕರೆತಂದ. ಊರಿಗೆ ಊರೇ ಬೆರಗಾಯಿತು. ಎಲ್ಲರೂ ಶಿವಶಿವಾ ಎನ್ನುತ್ತಾ ಬ್ರಹ್ಮೇಶ್ವರನ ಆಲಯದಲ್ಲಿ ನೆರೆಯಿತು, ಅಗ್ಗಣಿಯ ಹೊನ್ನಿತಂದೆ ಅಗ್ಗಳೆಯ ದೇವರಸ ಮುಂತಾದ ಶಿವಭಕ್ತರು ಓಡೋಡಿ ಬಂದರು.

ರಾಮಯ್ಯನ ರುಂಡವನ್ನು ಅವನ ಕೋರಿಕೆಯಂತೆ ಏಳು ದಿನ ವಿವಿಧ ಕ್ಷೇತ್ರಗಳಲ್ಲಿ ಮೆರೆಸಿ ತಂದು ಎಂಟನೇ ದಿನ ಮುಂಡವನ್ನು ಶಿವಲಿಂಗ ಕ್ಕೆದುರಿಗಿಸಿ, ಶಿವನಾಮ ಭಜಿಸುತ್ತ, ಅದರ ಮೇಲೆ ರುಂಡವನ್ನು ಕೂಡಿಸುತ್ತಿದ್ದಂತೆಯೇ ಲಿಂಗದಿಂದ ಝಗ್ಗೆಂದು ಬೆಳಕೊಂದು ಮಿಂಚಿ ಮಾಯವಾಯಿತು. ಮರುಕ್ಷಣದಲ್ಲಿಯೇ ಜೀವತಳೆದ ರಾಮಯ್ಯ ಎದ್ದು ಬಂದು ಭಕ್ತರೆಲ್ಲರಿಗೆ ನಮಸ್ಕಾರ ಮಾಡಿದನು. ನೆರೆದಿದ್ದ ಜನ 'ಶಿವ ಶಿವ ಜಯಭೋ' ಎಂದು ಕೂಗಿದರು.

ನಾಸ್ತಿಕರಿದನ್ನು ಓದಿದಾಗ ವಿಚಾರಪರವಶರಾಗಬೇಕಲ್ಲದೇ ಅಬ್ಬಲೂರು ಶಾಸನದಲ್ಲಿರುವ ಈ ಪವಾಡದ ವಿಚಾರವನ್ನು ಓದಬೇಕು. ಇದು ಕೇವಲ ಭಕ್ತರ ಭಾವುಕತೆ ಎಂದು ಮೂಗು ಮುರಿಯುವುದು ಸುಲಭ; ಆದರೆ ಭಗವದ್ಭಕ್ತಿ ಎಲ್ಲರಿಗೂ ಸುಮ್ಮನೆ ದೊರೆಯುವ ಸರಕಲ್ಲ, ಅದಕ್ಕೆ ಹಲವು ಜನ್ಮದ ಸಾಧನೆ ಇರಬೇಕು, ಪುಣ್ಯ ಕೂಡಿ ಬಂದಿರಬೇಕು: ಹೃದಯದಲ್ಲಿ ತುಂಬಿದ ರಾಕ್ಷಸೀ ಆಕಾಂಕ್ಷೆ, ಮಾನವೀಯ ದೌರ್ಬಲ್ಯ, ಅಸುರಾಂಶ ಸಂದೇಹಗಳು ತೊಲಗಬೇಕು; ಆಗ ಮಾತ್ರ ಮಾನವನಿಗೆ ದೈವೀ ಸಾಕ್ಷಾತ್ಕಾರದ ನಿರ್ಮಲ ಅನುಭವವಾಗುತ್ತದೆ.

—

## ಪಾವನ ಜ್ಯೋತಿರ್ಲಿಂಗ ಕ್ಷೇತ್ರ

# ಕೇದಾರನಾಥ

—ಆರ್. ಜಿ. ಹೆಗಡೆ.

ಕೇದಾರ ಹಿಂದುಗಳ ಪವಿತ್ರ ಕ್ಷೇತ್ರಗಳಲ್ಲೊಂದು. ಕೇದಾರಯಾತ್ರೆ ಮಾಡಿದವ ತನ್ನ ಜನ್ಮ ಸಾರ್ಥಕವೆಂದು ಭಾವಿಸುತ್ತಾನೆ. ಹಿಮಾಲಯ ಪರ್ವತಾವಳಿಯಲ್ಲಿ ಹನ್ನೊಂದು ಸಾವಿರ ಅಡಿಗಳಿಗಿಂತ ಎತ್ತರದಲ್ಲಿರುವ ಈ ಕ್ಷೇತ್ರ ತುಂಬಾ ಮಹತ್ವಪೂರ್ಣವಾದದ್ದು.

ನಮ್ಮ ಪುರಾಣಗಳಲ್ಲಿ, ಉತ್ತರಾಖಂಡಕ್ಕೆ ಸೇರಿದ, ಗಂಗೋತ್ರಿ, ಯಮುನೋತ್ರಿ, ಬದರೀನಾಥ, ಕೇದಾರ ಕ್ಷೇತ್ರಗಳು ಕೂಡಿ 'ಕೇದಾರ ಖಂಡ' ಎಂದು ವರ್ಣಿತವಾಗಿದೆ. ನಮ್ಮ ದೇಶದಲ್ಲಿ ದ್ವಾದಶ ಜ್ಯೋತಿರ್ಲಿಂಗ ಕ್ಷೇತ್ರಗಳು ಎಂದು ಹೇಳಲ್ಪಡುವ ಹನ್ನೆರಡು ಕ್ಷೇತ್ರಗಳಲ್ಲಿ ಕೇದಾರವೂ ಒಂದು. ಅಲ್ಲದೆ ಹಿಮಾಲಯದ ಕ್ಷೇತ್ರಗಳಲ್ಲೆಲ್ಲ ಅತ್ಯಂತ ರಮಣೀಯಸ್ಥಳ ಕೇದಾರ.

ಕೇದಾರನಾಥದ ಕುರಿತು, ಅನೇಕ ಪುರಾಣ ಕಥೆಗಳೂ, ದಂತಕಥೆಗಳೂ ಪ್ರಸಿದ್ಧವಾಗಿವೆ.

ಶಿವಪುರಾಣದಲ್ಲಿ ಶಂಕರನ ಅಂಗಗಳು ಬೇರೆ-ಬೇರೆ ಕ್ಷೇತ್ರಗಳಲ್ಲಿ ಪ್ರಕಟವಾದವೆಂದು ನಿರೂಪಿಸಲ್ಪಟ್ಟಿದೆ. ಕೈಗಳು ತುಂಗನಾಥದಲ್ಲಿ, ಮುಖ ರುದ್ರನಾಥದಲ್ಲಿ, ನಾಭಿ ಮಹೇಶ್ವರದಲ್ಲಿ, ಜಟೆ ಕಲ್ಪೇಶ್ವರದಲ್ಲಿ, ಬೆನ್ನು ಕೇದಾರದಲ್ಲಿ ಪ್ರಕಟವಾದವೆಂದು ಪುರಾಣದ ಕಥೆ. ಈ ಐದು ಕ್ಷೇತ್ರಗಳೂ ಸೇರಿ, 'ಪಂಚ ಕೇದಾರ' ಎಂದು ಕರೆಯಲ್ಪಡುತ್ತದೆ.

ಕೇದಾರದಲ್ಲಿ ಪರಮೇಶ್ವರನ ಬೆನ್ನು ಪ್ರಕಟವಾದ ಬಗ್ಗೆ ಒಂದು ಪುರಾಣ ಕಥೆಯಿದೆ.

ಕುರುಕ್ಷೇತ್ರದಲ್ಲಿ ಮಾಡಿದ ಗುರು ಹತ್ಯಾ ದೋಷದಿಂದ ಮುಕ್ತರಾಗಲೆಂದು, ಪಂಚಪಾಂಡವರು ಕಾಶಿಯಲ್ಲಿ ತಪಸ್ಸು ಮಾಡಿದರು. ಶಿವನಿಗೆ ಪಾಂಡವರಿಗೆ ದರ್ಶನವೀಯುವ ಇಚ್ಛೆಯಿರಲಿಲ್ಲ. ಆತ ಕಾಶಿಯಿಂದ ಹಿಮಾಚಲವನ್ನು ಸೇರಿ ಗುಪ್ತನಾದ. ಶಿವನನ್ನರಸಿ ಹಿಮಾಲಯಕ್ಕೆ ಬಂದ ಪಾಂಡವರು ಅವನ ಇರವನ್ನು ಶೋಧಿಸಿದರು. ಪರಶಿವನು ಗುಪ್ತಕಾಶಿಯನ್ನು ತ್ಯಜಿಸಿ ಕೇದಾರಕ್ಕೆ ಹೋದನು ಪುನಃ ಪಾಂಡವರು ಶಿವನ ಬೆನ್ನು ಹತ್ತಿದರು. ಪಾಂಡವರು ಸುಲಭವಾಗಿ ಬಿಡುವವರಲ್ಲವೆಂದರಿತ ಶಂಕರ, ವೃಷಭರೂಪ ತಾಳಿ, ಪಶುಗಳ ಮಂದೆಯನ್ನು ಸೇರಿದ. ಭೀಮನಿಗೆ ಒಮ್ಮೆ ಶಿವನ ಸುಳಿವು ಸಿಕ್ಕಿತು. ಆತ ಒಂದು ಯುಕ್ತಿ ಹುಡುಕಿದ. ಸಂಜೆಯವೇಳೆ ಪಶುಗಳೆಲ್ಲ ಮೇಯ್ದು ಮನೆಗೆ ಮರಳುವಾಗ, ದಾರಿಯ ಇಕ್ಕೆಲಗಳಲ್ಲಿ ಕಾಲಿಟ್ಟು ನಿಂತ ಭೀಮಸೇನ. ಕಣಿವೆಯ ಎರಡು ಕಡೆಗೂ ಕಾಲಿಟ್ಟು ನಿಂತ ಭೀಮನ ನಡುವೆ ಎಲ್ಲ ಪಶುಗಳೂ ಸಾಗಿ ಹೋದವು. ಭಗವಾನ್ ಶಂಕರ ಮಾತ್ರ ಭೀಮನ ಕಾಲುಗಳಡಿ ನುಸುಳಿ ಹೋಗಲು ಇಷ್ಟಪಡಲಿಲ್ಲ. ಆ ಬಲಿಷ್ಠ ವೃಷಭ ನೆಲವನ್ನು ಬಗೆದು ಒಳಸೇರಲು ಹವಣಿಸಿತು. ಭೀಮ ಶಿವನನ್ನು ಹಿಡಿಯಲು ಓಡುವಷ್ಟರಲ್ಲಿ ಬೆನ್ನಿನ ವಿನಃ ಉಳಿದೆಲ್ಲ ಅಂಗಗಳು ಭೂಮಿಯೊಳಗಿದ್ದವು. ಕೈಗೆ ಸಿಕ್ಕಿದ ಬೆನ್ನನ್ನೇ ಹಿಡಿದು,

ಭೀಮ ಬಾವಾವೇಶದಿಂದ ಆಳುವುದಕ್ಕೆ ಪ್ರಾರಂಭಿಸಿದ ಶಂಕರ ಅವನ ಭಕ್ತಿಗೆ ಮೆಚ್ಚಿ ಪ್ರತ್ಯಕ್ಷನಾದ; ಪಾಂಡವರನ್ನು ಅನುಗ್ರಹಿಸಿದ. ಆಗ ಭೀಮನ ಕೈಗೆ ಸಿಕ್ಕಿದ ಶಿವನ ಬೆನ್ನು ಅದೇ ಸ್ಥಳದಲ್ಲಿ ಪ್ರಕಟವಾಗಿ ಆ ಸ್ಥಳ 'ಕೇದಾರಪುರಿ' ಎನ್ನಿಸಿಕೊಂಡಿತು ನೆಲದೊಳಗೆ ಅಂತರ್ಧಾನವಾದ ಶಿವನ ಶಿರೋಭಾಗ ನೇಪಾಳದಲ್ಲಿ ಪ್ರಕಟವಾಯಿತು. ಅದೇ ಕಾಟಮಾಂಡುವಿನಲ್ಲಿರುವ ಭವ್ಯ ಪಶುಪತಿನಾಥ ಮಂದಿರ

ಕೇದಾರನಾಥ ದೇವಾಲಯ ಉತ್ತರಖಂಡದಲ್ಲೇ ಅತಿ ಪ್ರಾಚೀನ ಹಾಗೂ ಭವ್ಯವಾದದ್ದು. ಎತ್ತರವಾದ ಚೌಕೋನಾಕೃತಿಯ ಕಟ್ಟೆಯ ಮೇಲೆ ವಿಶಾಲವಾದ ಕೇದಾರನಾಥ ದೇವಾಲಯವಿದೆ. ಗರ್ಭಗುಡಿಯ ನಡುವೆ ಬೃಹದ್ಗಾತ್ರದ ಶಿಲೆಯ ಲಿಂಗವಿದೆ. ಗುಡಿಯ ಚತುರ್ದಿಕ್ಕುಗಳಲ್ಲಿ, ಶ್ರೀ ಕೃಷ್ಣ ದ್ರೌಪದಿ ಹಾಗೂ ಪಂಚಪಾಂಡವರ ಸುಂದರ ಮೂರ್ತಿಗಳಿವೆ. ದೇವಾಲಯದ ಸಮೀಪದಲ್ಲಿ ಹಂಸಕುಂಡ, ಉದಕಕುಂಡ, ರೇತಕುಂಡ, ಎಂಬ ಹೊಂಡಗಳಿವೆ. ಯಾತ್ರಿಕರು ಹಂಸಕುಂಡದಲ್ಲಿ ಪಿತೃಗಳ ಜನ್ಮಕುಂಡಲಿಗಳನ್ನು ವಿಸರ್ಜಿಸುತ್ತಾರೆ. ಉದಕಕುಂಡಲದ ನೀರಿನಲ್ಲಿ ಆಚಮನ, ಅನುಷ್ಠಾನ ನಡೆಸುತ್ತಾರೆ —

## ಶ್ರೀ ಕ್ಷೇತ್ರಕ್ಕೆ

## ನಟ ಶ್ರೀ ಎಂ.ಜಿ.ಆರ್ ಭೇಟಿ.

ಕರ್ನಾಟಕದಲ್ಲಿ ಚಿತ್ರೀಕರಣಕ್ಕಾಗಿ ಬಂದಿರುವ ತಮಿಳು ಚಿತ್ರರಂಗದ ಖ್ಯಾತನಟ ಎಂ.ಜಿ. ರಾಮಚಂದ್ರರವರು ಶ್ರೀ ಶ್ರೀಗಳವರ ದರ್ಶನಾರ್ಥವಾಗಿ ಇಲ್ಲಿಗೆ ಬಂದಿದ್ದ ಸಂದರ್ಭದಲ್ಲಿ ಕ್ಷೇತ್ರದ ವಿದ್ಯಾರ್ಥಿಗಳನ್ನುದ್ದೇಶಿಸಿ ಮಾತನಾಡಿದರು. ಜೀವನದಲ್ಲಿ ಶಿಸ್ತು ಅತಿಮುಖ್ಯ. ದೇವರು ಮಾನವತ್ವದ ಗುಣವನ್ನು ನೋಡಿ ಪ್ರೀತಿಸುತ್ತಾನೆಯೇ ಹೊರತು ಮಾನವನ ಸಿರಿ ಸಂಪದ ಅಥವಾ ಜಾತಿಕುಲಗಳನ್ನು ಪರಿಗಣಿಸಿ ಪ್ರೀತಿಸುವುದಿಲ್ಲ. ಶ್ರೀ ಕ್ಷೇತ್ರದ ಸ್ವಾಮಿಗಳವರ ಆಶ್ರಯದಲ್ಲಿ ಜಾತಿಮತ ಭೇದಭಾವಗಳನ್ನು ತೊರೆದು ಶಿಸ್ತಿನಿಂದ ಬಾಳುತ್ತಿರುವ ನೀವೆಲ್ಲರೂ ರಾಷ್ಟ್ರದ ಉತ್ತಮ ಪ್ರಜೆಗಳಾಗಿ ರೂಪಿತವಾಗುತ್ತಿದ್ದೀರಿ. ಶ್ರೀ ಶ್ರೀ ಸ್ವಾಮಿಗಳವರು ಜನತಾ ಸೇವೆಗಾಗಿ ಶ್ರಮಿಸುತ್ತಿರುವುದನ್ನು ನೋಡಿ ಅತೀವ ಆನಂದವಾಗುತ್ತಿದೆ ಎಂಬುದಾಗಿ ಮೆಚ್ಚಿಗೆ ಸೂಚಿಸಿದರು. —

[೨೦ ನೇ ಪುಟದಿಂದ ]

★ ಜಾನಪದ ಜೇನು ★

ಈ ಮಾತು ಕೇಳಿದ ತಂಗಿಯ ಸ್ವಾಭಿಮಾನ ಸಿಡಿದೆದ್ದು ನಿಲ್ಲುತ್ತದೆ. ಅಣ್ಣ ಬಿಟ್ಟ ಮೊಲೆ ಹಾಲನ್ನು ಕುಡಿದ ತಂಗಿಗಿಂತ, ಅವನಿಗೆ ತನ್ನ ಹೆಂಡತಿಯ ಸಂಬಂಧವೇ ಹೆಚ್ಚಾಯಿತೆಂದು ತಿಳಿದು, ಇನ್ನು ಹೆಚ್ಚು ಬೇಡುವುದು ತರವಲ್ಲವೆಂದು ಭಾವಿಸುತ್ತಾಳೆ. ತನ್ನ ಮಗನಿಗೆ ಹೆಣ್ಣು ಕೊಡುವವರಿಗೇನೂ ಕೊರತೆಯಿಲ್ಲ,

ಹತ್ತೂರು ಆಳುವ ಗೌಡ ನಾಯ್ಕರ ಮಗಳ
ಮದುವೇಯ ಮಾಡಿ ತರುವೇನ। ಅಣ್ಣಯ್ಯ
ನಿನ್ನೂರ ಮ್ಯಾಲೆ ಬರುವೇನ ॥
ದಿಬ್ಬಾಣ ಹೊರಡಿಸಿ ನಿನ್ನೂರಿಗೆ ಬರುವಾಗ
ನಿನಗೊಂದು ವೀಳ್ಯಾವ ಕೊಡುತೀನಿ। ಅಣ್ಣಯ್ಯ
ನೀ ನೋಡಿ ಬಾಯ ಬಿಡುತೀಯ ॥

'ಅಂತಸ್ತಿನಲ್ಲಿ, ಅನುಕೂಲದಲ್ಲಿ ನಿನಗಿಂತ ದೊಡ್ಡವರಾಗಿರುವವರ ಮನೆಯಲ್ಲಿ, ನಿನ್ನ ಮಗಳಿಗಿಂತ ಚೆಲುವೆಯಾದ ಹೆಣ್ಣು ತರುತ್ತೇನೆ. ಮದುವೆಯ ದಿಬ್ಬಣ ನಿಮ್ಮೂರ ಮುಂದೆಯೇ ಬರುತ್ತದೆ. ಆಗ ನಿನಗೇ ಪಶ್ಚಾತ್ತಾಪವಾಗುತ್ತದೆ" ಎಂದು ಹೇಳಿ ಕೊನೆಯ ಮಾತೊಂದನ್ನು ನುಡಿಯುತ್ತಾಳೆ —

ಮಾವನ ಮನೆ ಮುಂದೆ ಮಾವಿನ ಗಿಡ ಹುಟ್ಟಿ
ಹೂವಾದರೇನೂ ಫಲವಿಲ್ಲ। ಅಣ್ಣಯ್ಯ
ಮಗಳಿದ್ದರೇನು ಋಣವಿಲ್ಲ ॥

"ಹೆಣ್ಣು ಕೊಡದಿದ್ದರೂ ಚಿಂತೆಯಿಲ್ಲ. ನೀನು ಭಾಗ್ಯವಂತನಾಗಿ ಬಾಳು" ಎಂದು ಹೇಳಿ ಕಣ್ಣಲ್ಲಿ ನೀರು ತುಂಬಿಕೊಂಡು ಹಿಂರುಗುತ್ತದೆ. ಆ ಹೆಂಗರುಳು. ಒಡಹುಟ್ಟಿದ ತಂಗಿಯ ಕಡೆನುಡಿಯನ್ನು ಕೇಳಿ ಅಣ್ಣ —

ಮನದಾಗೆ ಮರುಗ್ಯಾನ, ಕುದುರೇರಿ ಹೊರಟಾನ
ಹಾದ್ಯಾಗ ತಂಗೀಯ ತಡೆದಾನ। ನುಡಿದಾನ
ಬಾರಮ್ಮ ಮಗಳ ಕೊಡತೇನಿ ॥

—

# ಶರಣು-ಶರಣು

(೭ ನೇ ಪುಟದಿಂದ)

ಈ ಶರಣ ಭಾವದಿಂದ ಅವರು ಏನನ್ನೂ ಕಳೆದುಕೊಳ್ಳುವುದಿಲ್ಲ, ಹೆಚ್ಚಿನದನ್ನು ಪಡೆಯುತ್ತಾರೆ. ಅವರ ಪ್ರೇಮ ಪರಿಶುದ್ಧವಾಗುತ್ತದೆ, ಅನಂತವಾಗುತ್ತದೆ, ವಿಶ್ವವ್ಯಾಪಿಯಾಗುತ್ತದೆ ಈಶ್ವರನಲ್ಲಿ ಅರ್ಪಣವೆಂದರೆ ವ್ಯಕ್ತಿತ್ವದ ವಿನಾಶವಲ್ಲ. ವಿಕಾಸವೆಂಬುದನ್ನು ಅವರು ಅನುಭವದಿಂದ ಅರಿಯುತ್ತಾರೆ. ಅಂತೇ ಅರಿತರೆ ಶರಣ, ಮರೆತರೆ ಮಾನವ' ಎಂದು ಗಾದೆಯುಂಟು. ನಮ್ಮಲ್ಲಿ ಸುಪ್ತವಾದ ಅನಂತ ಶಕ್ತಿಯನ್ನು ಅರಿತುಕೊಳ್ಳುವುದೇ ಶರಣನ ಲಕ್ಷಣ ಅದನ್ನು ಮರೆತು ಬದುಕುವುದು ಮಾನವ ಲಕ್ಷಣ ಆದರೆ ಶರಣನಾಗುವುದು ಸುಲಭ ವಿಷಯವಲ್ಲ. ನಾವು ಪೂರ್ಣ ಅರ್ಥದಲ್ಲಿ ಶರಣರಾಗುವುದಕ್ಕಿಂತ ಮೊದಲು ನಮ್ಮ ನಮ್ಮ ಪರಿಮಿತಿಯಲ್ಲಿ ನಮ್ಮ ಜೀವನವನ್ನು ಪ್ರಾಮಾಣಿಕವಾಗಿ ನಡೆಸಬೇಕು. ಪ್ರಾಮಾಣಿಕತೆಗೆ ಶರಣರಾಗುವುದೇ ಶರಣಮಾರ್ಗದಲ್ಲಿಯ ಮೊದಲ ಹೆಜ್ಜೆ. ಇಂದು ಅನೇಕ ಬುದ್ಧಿವಂತರಿಗೆ ಅಧ್ಯಾತ್ಮದಲ್ಲಿ ಆಸಕ್ತಿಯಿಲ್ಲ. ಆದರೆ ತಮ್ಮ ಸ್ವಭಾವಕ್ಕೆ ಅನುಗುಣವಾಗಿ ನಿಷ್ಠೆಯಿಂದ ಬಾಳಬೇಕೆಂದು ಯಾರಿಗೆ ಅನಿಸುವುದಿಲ್ಲ? ಸ್ವಭಾವವೇ ಅಧ್ಯಾತ್ಮವೆಂದು ಭಗವದ್ಗೀತೆ ಹೇಳಿದೆ. ಹೀಗೆ ನಾವು ನಿಜವಾದ ಅರ್ಥದಲ್ಲಿ ಬುದ್ಧಿಶರಣರು, ಸ್ವಭಾವ ಶರಣರು ಆಗೋಣ; ನಮ್ಮನ್ನು ನಾವು ಅರಿತುಕೊಳ್ಳೋಣ. ಅರಿತಂತೆ ಇರೋಣ; ಇರುವ ಪ್ರಾಮಾಣಿಕ ಪ್ರಯತ್ನವನ್ನಾದರೂ ಮಾಡೋಣ. ನಮ್ಮ ಪ್ರಾಮಾಣಿಕ ಆದರ್ಶಗಳಿಗೆ ಶರಣಾಗೋಣ. ಶರಣು ಶರಣು ಎಂದು ಇದಿರುಗೊಳ್ಳುವಾಗ ಎಲ್ಲ ವ್ಯಕ್ತಿಗಳೂ ತಂತಮ್ಮ ಆದರ್ಶಗಳಿಗೆ ಶರಣಾಗಲಿ ಎಂದು ಕೇಳಿಕೊಳ್ಳೋಣ. ಅಂದರೆ ನಾವು ಹೊಸ ಕಾಲದ ಶರಣರಾಗುವ ದಾರಿಯಲ್ಲಿ ಮೊದಲಡಿಯನ್ನು ಇಡುತ್ತೇವೆ. ಅದಿಲ್ಲದೆ ನಾವು ಮನಬಂದಂತೆ ನಡೆದರೆ ಪರಿಸ್ಥಿತಿ ಶರಣರಾಗಿ ದುಃಖದುಮ್ಮಾನಗಳಿಗೆ ಗುರಿಯಾಗುತ್ತೇವೆ, ಸಮಾಜದ ಸಂಕಟರಾಶಿಯನ್ನೂ ಹೆಚ್ಚಿಸುತ್ತೇವೆ.

—

(6ನೇ ಪುಟದಿಂದ)

# ಲಿಂ|| ಪಂಡಿತರತ್ನ ಡಾ|| ಬಿ. ಶಿವಮೂರ್ತಿಶಾಸ್ತ್ರಿಗಳು

ಸರಕಾರದ ಮನವೊಲಿಸಿ ಅನೇಕ ಮುಖದಲ್ಲಿ ಸರಕಾರದ ಸಹಾಯಧನ ಪಡೆದು ಪರಿಷತ್ತು ಬಹುಮುಖ ಕಾರ್ಯ ಚಟುವಟಿಕೆಗಳಲ್ಲಿ ನಿರತವಾಗುವಂತೆ ಮಾಡಿದ ಕೀರ್ತಿಗೆ ಯಾರು ಏನೇ ಹೇಳಲಿ ಶಾಸ್ತ್ರಿಗಳೇ ಕಾರಣವೆಂಬುದಂತೂ ಸತ್ಯಸ್ಯಸತ್ಯ ಕಥನ. ಸಾರ್ವಜನಿಕ ಸದಸ್ಯತ್ವ ಶಾಸ್ತ್ರಿಗಳ ಪ್ರಯತ್ನದ ಫಲವಾಗಿ ದೊಡ್ಡ ಸಂಖ್ಯೆಗೇರಿತು. ಪರಿಷತ್ತು ನಡೆಸುತ್ತಿದ್ದ ಜಾಣ, ಕಾವ್ಯ ಇತ್ಯಾದಿ ಪರೀಕ್ಷೆಗಳು ಸಕ್ರಮಗೊಂಡವು. ಕನ್ನಡ ನಿಘಂಟು ಕಾರ್ಯ ಒಂದು ವ್ಯವಸ್ಥಿತ ಕ್ರಮದಲ್ಲಿ ನಡೆಯಲು ಬೇಕಾಗುವ ಸರ್ವಸಿದ್ಧತೆಗಳೂ ಆದವು. ಹೀಗೆ ಪರಿಷತ್ತಿನ ಸೇವೆಯಲ್ಲಿ ಎಂಟು ವರ್ಷಗಳು ಶಾಸ್ತ್ರಿಗಳು ಅಧ್ಯಕ್ಷರಾಗಿ ಕೆಲಸ ಮಾಡಿದುದು ಅವರ ಶಕ್ತಿ ನೈಪುಣ್ಯಗಳಿಗೊಂದು ಮೈಲುಗಲ್ಲು.

ಇವೂ ಅಲ್ಲದೆ ಶಾಸ್ತ್ರಿಗಳವರು ಮೈಸೂರು ಸಾಹಿತ್ಯ ಅಕಾಡೆಮಿ, ಸಂಗೀತ ಅಕಾಡೆಮಿ, ಕನ್ನಡ ನಿಘಂಟು ಸಂಪಾದಕ ಸಮಿತಿ, ಕನ್ನಡ ವಿಶ್ವಕೋಶ ಸಮಿತಿ, ಆಕಾಶವಾಣಿ ಸಲಹಾ ಸಮಿತಿ, ಬಸವ ಸಮಿತಿ ಕಾರ್ಯ ಸಮಿತಿ, ಅಖಿಲ ಭಾರತ ವೀರಶೈವ ಮಹಾಸಭಾ ಕಾರ್ಯ ಸಮಿತಿ, ಸರ್ವಭೂಷಣಧರ್ಮದರ್ಶಿ ಸಮಿತಿ, ಮೈಸೂರು ಮುದ್ರಣಕಾರರ ಸಹಕಾರಸಂಘ, ಮೈಸೂರು ಸರಕಾರದ ಗಡಿ ಸಲಹಾ ಸಮಿತಿ, ಇವೇ ಮೊದಲಾದ ಸಂಘ-ಸಂಸ್ಥೆಗಳ ಸದಸ್ಯತ್ವವನ್ನು ಪಡೆದು ತಮ್ಮದೇ ಆದ ಅನುಭವಪೂರ್ಣ ಮಾರ್ಗದರ್ಶನ ಮಾಡುತ್ತಿದ್ದರು

ಶಾಸ್ತ್ರಿಗಳವರೊಡನೆ ಸಂಭಾಷಣೆ ಮಾಡುವುದೂ ಒಂದು ಚಂದ. ಅವರದು ನಕ್ಕುನಗಿಸುವ ನುಡಿ, ನ್ಯಾಯನಿಷ್ಠುರ ನುಡಿ; ಕಂಡದ್ದನ್ನು ಏನೇ ನಿಷ್ಠುರ ಬಂದರೂ ಬೆದರದೆ ಹೇಳಿಬಿಡುವ ಪ್ರವೃತ್ತಿ. ಈ ಪ್ರವೃತ್ತಿ ಅವರನ್ನು ಸ್ವಲ್ಪ ನಿಷ್ಠುರಕ್ಕೊಳಗು ಮಾಡಿತು. ಆದರೂ ಶಾಸ್ತ್ರಿಗಳು ಅದಕ್ಕೆ ಅಂಜುವ ಅಧೀರರಾಗಿರಲಿಲ್ಲ. ಆದರೂ ಯಾರೊಡನೆ ಎಷ್ಟೇ ಸಲ ವಿರೋಧವಾಗಿ ವರ್ತಿಸಿದರೂ ಮರುಕ್ಷಣವೇ ಅವರನ್ನು ನಗಿಸಿ ಆ ವಿರೋಧದ ಗಾಯವನ್ನು ಅಳಿಸಿಬಿಡುತ್ತಿದ್ದರು. ದೀರ್ಘವಿರೋಧ ಶಾಸ್ತ್ರಿಗಳ ಹುಟ್ಟು ಗುಣವಲ್ಲ ಕೇವಲ ಸ್ವಲ್ಪವೇ ವಿದ್ಯಾಭ್ಯಾಸಮಾಡಿ ಇಷ್ಟೊಂದು ಘನತೆವೆತ್ತ ವ್ಯಕ್ತಿತ್ವವನ್ನು ರೂಪಿಸಿಕೊಂಡ ಶಾಸ್ತ್ರಿಗಳ ಸಾಹಸ, ಧೈರ್ಯ, ಪ್ರತಿಭೆ, ವಾಕ್ಪಟುತ್ವಾದಿಗಳು ಮೆಚ್ಚತಕ್ಕವು ಮತ್ತು ಅನುಕರಣೀಯವಾದವು. ಜೀವನದಲ್ಲಿ ಅನೇಕ ಕಹಿಗಳನ್ನು ಕೊನೆಕೊನೆಗೆ ಉಂಡ ಶಾಸ್ತ್ರಿಗಳು ಅವನ್ನೆಲ್ಲ ತಮ್ಮ ಬಹುಮುಖ ಕಾರ್ಯ ಚಟುವಟಿಕೆಗಳಲ್ಲಿ ಮರೆತು ಕೊನೆಯವರೆಗೆ ನಗುತ್ತಲೇ ಇದ್ದರು.. ಯಾವುದನ್ನೂ ಮನಸ್ಸಿಗೆ ಅಷ್ಟಾಗಿ ಹಚ್ಚಿಕೊಳ್ಳುತ್ತಲೇ ಇರಲಿಲ್ಲ.

ಇಂಥ ಶಾಸ್ತ್ರಿಗಳು ತಮ್ಮ ಕೊನೆಯ ಸಂಸ್ಕಾರ ಶ್ರೀ ಕ್ಷೇತ್ರ ಸಿದ್ಧಗಂಗೆಯಲ್ಲಿಯೇ ಆಗಬೇಕೆಂದು ಜೀವಂತವಿರುವಾಗಲೇ ಶ್ರೀ ಕ್ಷೇತ್ರಾಧಿಪತಿಗಳೂ ತ್ರಿವಿಧ ದಾಸೋಹಿಗಳೂ ಆದ ಶ್ರೀ ಶ್ರೀ ಶಿವಕುಮಾರಮಹಾಸ್ವಾಮಿಗಳವರಲ್ಲಿ ಬಿನ್ನವಿಸಿಕೊಂಡಿದ್ದರು. ಶ್ರೀ ಶ್ರೀಗಳವರು ಶಾಸ್ತ್ರಿಗಳವರ ಕೊನೆಯ ಬಯಕೆಯನ್ನು ನಡೆಸಿಕೊಟ್ಟದ್ದು ಅವರ ಪುಣ್ಯವಿಶೇಷವೇ. ಶೋಕತಪ್ತ ಸಹಸ್ರಾರು ಜನರೊಂದಿಗೆ ಶ್ರೀ ಕ್ಷೇತ್ರಕ್ಕೆ ಬೆಂಗಳೂರಿನಿಂದ ತಾ|| 16-1-76 ರಲ್ಲಿ ತಂದ ಶಾಸ್ತ್ರಿಗಳವರ ಪಾರ್ಥಿವ ಶರೀರ ಸಂಸ್ಕಾರವು ವೀರಶೈವ ಸಂಪ್ರದಾಯದಂತೆ ಕ್ರಿಯಾಸಮಾಧಿಗೊಂಡಿತು. ಶಾಸ್ತ್ರಿಗಳವರ ಆತ್ಮಕ್ಕೆ ಚಿರ ಶಾಂತಿಯನ್ನು ಕೋರುವುದರ ಮೂಲಕ 'ಸಿದ್ಧಗಂಗಾ' ಪತ್ರಿಕೆ ತನ್ನ ಶ್ರದ್ಧಾಂಜಲಿಯನ್ನು ಸಲ್ಲಿಸುತ್ತದೆ.

—

# ಬಡವರ ಭಾಗ್ಯೋದಯ

ಭೂ ಸುಧಾರಣೆ ಶಾಸನವನ್ನು ಕಾರ್ಯಗತ ಮಾಡುತ್ತಿರುವುದರಿಂದ ಕರ್ನಾಟಕದಲ್ಲಿ ಸುಮಾರು 80 ಸಾವಿರ ಕುಟುಂಬಗಳು ಭೂಮಿಯನ್ನು ಪಡೆಯುವುವು. ಇದರಲ್ಲಿ 40 ಸಾವಿರ ಹರಿಜನ ಗಿರಿಜನ ಕುಟುಂಬಗಳು. ಇದಲ್ಲದೆ ಹತ್ತು ಹೆಕ್ಟೇರುಗಳಲ್ಲಿ ಸಾಗುವಳಿ ಮಾಡುತ್ತಿರುವ ಒಕ್ಕಲುಗಳಿಗೆ ಭೂ ಮಾಲೀಕತ್ವದ ಹಕ್ಕುಗಳನ್ನು ಕೊಡಲಾಗುವುದು.

## ಮನೆಯಿಲ್ಲದವರಿಗೆ ಮನೆ:

ವಾಸಕ್ಕೆ ಮನೆ ಇಲ್ಲದ ಕೃಷಿಕಾರ್ಮಿಕರಿಗೆ ರಾಜ್ಯದಲ್ಲಿ ಸುಮಾರು 5 ಲಕ್ಷ ನಿವೇಶನಗಳನ್ನು ಉಚಿತವಾಗಿ ಹಂಚಲಾಗಿದೆ. ಜನತಾ ಗೃಹ ನಿರ್ಮಾಣ ಯೋಜನೆಯನ್ವಯ 52 ಸಾವಿರಕ್ಕೂ ಮೀರಿ ಕಡಿಮೆ ವೆಚ್ಚದ ಮನೆಗಳನ್ನು ಕಟ್ಟುವ ಕಾರ್ಯವನ್ನು ಕೈಗೊಂಡಿದ್ದು ಈಗಾಗಲೇ ಇಂಥ13,500 ಮನೆಗಳಲ್ಲಿ ಜನ ವಾಸಿಸಿ ಹಾಡಿ ಹರಸುತ್ತಿದ್ದಾರೆ.

## ಕಾರ್ಮಿಕರಿಗೆ ಹೆಚ್ಚಿನ ವೇತನ:

ಸುಮಾರು ಮೂವತ್ತು ಮೂರು ಲಕ್ಷ ಕೆಲಸಗಾರರು ಅಕ್ಟೋಬರ್ 2, 1975ರಿಂದ ಕನಿಷ್ಠ ವೇತನ ಹೆಚ್ಚಳದ ಫಲವಾಗಿ ಅಧಿಕ ವೇತನ ಪಡೆಯುತ್ತಿದ್ದಾರೆ. ಅವರಲ್ಲಿ 27 ಲಕ್ಷ ಕೃಷಿ ಕಾರ್ಮಿಕರು, ಐದು ಲಕ್ಷ ಬೀಡಿ ಕಾರ್ಮಿಕರು ಮತ್ತು ಒಂದು ಲಕ್ಷ ಕಲ್ಲುಕುಟಿಗರು ಮುಂತಾದವರಿದ್ದಾರೆ.

## ನೇಕಾರರಿಗೆ ನೆರವು:

ಕರ್ನಾಟಕ ಕೈಮಗ್ಗ ನೇಕಾರರ ಉದ್ದಿಮೆ ಅಭಿವೃದ್ಧಿ ಕಾರ್ಪೊರೇಷನ್ ರಚಿಸಲಾಗಿದೆ. ಕೈಮಗ್ಗದ ಉದ್ಯಮದಲ್ಲಿ ನಿರತರಾಗಿರುವವರಿಗೆ ಅದು ನೆರವಿತ್ತು ಈ ಉದ್ದಿಮೆಯನ್ನು ಪುನರುಜ್ಜೀವಗೊಳಿಸುವುದು.

ಅಮಾನುಷ ಜೀತ ಪದ್ಧತಿಯನ್ನು ತೊಡೆದು ಹಾಕಲಾಗಿದೆ.

ಸಹಕಾರಿ, ಸರ್ಕಾರ ಮತ್ತು ಸಾರ್ವಜನಿಕ ಆರ್ಥಿಕ ಸಂಸ್ಥೆಗಳಿಗೆ ಮರಳಿ ಮುಟ್ಟಿಸಬೇಕಾದ ಸಾಲಗಳನ್ನು ಉಳಿದು ಇತರೆ ಸಾಲಗಳ ಭಾರದಿಂದ ವಾರ್ಷಿಕ ಆದಾಯ 2,400 ರೂ. ಮೀರದ ಸಣ್ಣ ರೈತರು, ಕೃಷಿಕಾರ್ಮಿಕರು ಮತ್ತಿತರ ದುರ್ಬಲ ವರ್ಗದವರನ್ನು ಮುಕ್ತಗೊಳಿಸಲಾಗಿದೆ.

ಪ್ರಧಾನ ಮಂತ್ರಿ ಶ್ರೀಮತಿ ಇಂದಿರಾ ಗಾಂಧಿಯವರ 20 ಅಂಶಗಳ ಕಾರ್ಯಕ್ರಮ ಜಾರಿಗೆ ತರುವಲ್ಲಿ ಕರ್ನಾಟಕ ಕೈಗೊಂಡಿರುವ ಅನೇಕ ಕಾರ್ಯಕ್ರಮಗಳಲ್ಲಿ ಇವು ಕೆಲವುಮಾತ್ರ.

Registered with the Registrar of News Papers for India under No. 17189/69

# ವಿಜಯಾ ಬ್ಯಾಂಕ್ ನಿಂದ

## ಮತ್ತೊಂದು ಹೊಸ ಉಳಿತಾಯ ಯೋಜನೆ !

## ವಿಜಯಾಂತ ಠೇವಣಿ ಯೋಜನೆ

**ಠೇವಣಿಯನ್ನು ದ್ವಿಗುಣಗೊಳಿಸಿ**
**ರಜಾ ದಿನಗಳ ಆಹ್ಲಾದಕರ ವಿದೇಶ ಪ್ರವಾಸಗಳಿಸಿ.**

10,000 ರೂ. ಗಳ ಠೇವಣಿಯನ್ನು ಕೊಡಗಿಸಿ ಮತ್ತು
12 ವರ್ಷಗಳಲ್ಲಿ 20,000 ರೂ.ಗಳನ್ನು ಪಡೆಯಿರಿ.

ಮತ್ತು

ಮದ್ರಾಸಿನಿಂದ ಕೌಲಾಲಂಪುರ, ಪೆನಾಂಗ್ ಹಾಗೂ ಸಿಂಗಪುರ ಗಳಿಗೆ ವಿನೋದಪೂರ್ಣ ಪ್ರವಾಸಕ್ಕೆ ತ್ವರೆಮಾಡಿರಿ.



ಈ ಬಿಡುವಿನ ಪ್ರವಾಸವು ವಿಮಾನ ಪ್ರಯಾಣದ ವೆಚ್ಚ, ಹೋಟೆಲಿನಲ್ಲಿ ತಂಗುವ ಸೌಲಭ್ಯಗಳು, ಊಟೋಪಚಾರ, ನಗರ ಸಂಚಾರ ಸೌಲಭ್ಯ, ಪ್ರೇಕ್ಷಣೀಯ ಸ್ಥಳಗಳಿಗೆ ಭೇಟಿ....ಇನ್ನೂ ಹಲವಾರು ಸೌಲಭ್ಯಗಳನ್ನೊಳಗೊಂಡಿರುತ್ತದೆ.

## ಜೀವನದಲ್ಲಿ ಒಮ್ಮೆ ಮಾತ್ರ!
## ತಪ್ಪಿಸಿಕೊಳ್ಳಬೇಡಿ! ಇಂದೇ ಸೇರಿರಿ!

ವಿವರಗಳಿಗೆ ನಮ್ಮ 400 ಶಾಖೆಗಳಲ್ಲಿ ಯಾವುದಾದರೊಂದು ಶಾಖೆಯೊಡನೆ ಸಮಾಲೋಚಿಸಿರಿ.

ಆಡಳಿತ ಕಛೇರಿ :
2, ರೆಸಿಡೆನ್ಸಿ ರಸ್ತೆ
ಬೆಂಗಳೂರು-560025

ರಿಜಿಸ್ಟರ್ಡ್ ಆಫೀಸ್ :
ಲೈಟ್ ಹೌಸ್ ಹಿಲ್ ರೋಡ್
ಮಂಗಳೂರು-575003

ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.